# ಪರಿವಿಡಿ

ವಿಷಯ

# ಕರ್ಣನ ಕಥೆ



## ಕರ್ಣ ಜನಿಸಿದ ಮೊದಲು

ಪವಿತ್ರ ಯಾದವ ವಂಶದಲ್ಲಿ ಶೂರಸೇನನು ವಿಖ್ಯಾತ ರಾಜನು. ಶ್ರೀಕೃಷ್ಣನ ತಂದೆ ವಸುದೇವನು ಆತನ ಹಿರಿಯ ಮಗನು. ಇನ್ನೂ ಹಲವು ಗಂಡು-ಹೆಣ್ಣು ಮಕ್ಕಳಿದ್ದರು. ಹೆಣ್ಣುಮಕ್ಕಳಲ್ಲಿ 'ಪೃಥೆ' ಎಂಬಾಕೆಯು ಹಿರಿಯಳು. ಈಕೆಯೇ 'ಕೊಡುಗೈಗಲಿ ಕರ್ಣ'ನಿಗೆ ಜನ್ಮ ನೀಡಿದವಳು. ಈಕೆಯನ್ನು ಶೂರಸೇನನು ಕುಂತೀಭೋಜನೆಂಬ ತನ್ನ ಆಪ್ತನಿಗೆ ಅವನ ಬಯಕೆಯ ಮೇರೆಗೆ ದತ್ತುಪುತ್ರಿಯನ್ನಾಗಿ ನೀಡಿದ್ದನು. ಮೊದಲು 'ಪೃಥೆ' ಎಂದು ಹೆಸರಿದ್ದ ಈಕೆಯನ್ನು ಕುಂತೀಭೋಜನು 'ಕುಂತಿ' ಎಂದು ಕರೆಯ ಹತ್ತಿದನು. ಕೊನೆಗೂ ಇದೇ ಹೆಸರು ಆಕೆಯ ಅಂಕಿತವಾಯಿತು.

ಕುಂತೀಭೋಜನು ತನಗೆ ದತ್ತುವಾಗಿ ಬಂದಿದ್ದ ಕುಂತಿಯನ್ನು ಒಳ್ಳೇ ಮಮತೆಯಿಂದ ಕಾಪಾಡಹತ್ತಿದನು. ದಿನದಿನಕ್ಕೂ ಆಕೆ ಬೆಳೆದಳು, ದೊಡ್ಡವ ಳಾದಳು, ದೇವ-ಗುರು-ಹಿರಿಯರನ್ನು ಒಳ್ಳೆ ಭಕ್ತಿಯಿಂದ ಪೂಜ್ಯರೆಂದು ಭಾವಿಸಹತ್ತಿದಳು. ನಿತ್ಯವೂ ದೇವಪೂಜೆ, ಬ್ರಾಹ್ಮಣ ಪರಾಮರಿಕೆ, ಅತಿಥಿ ಸತ್ಕಾರ, ದಾನ-ಧರ್ಮ ಮುಂತಾದ ಸತ್ಕ್ರಿಯೆಗಳಲ್ಲಿ ಆಕೆಯ ಕಾಲಹೋಗು ತ್ತಿದ್ದಿತು. ಈಕೆಯ ಸತ್ಕರ್ಮಗಳನ್ನು ಹಾಗು ಸದ್ಗುಣಗಳನ್ನು ಕಂಡು ಕುಂತೀಭೋಜನಿಗೆ ಅತ್ಯಾನಂದ! ಈ ನನ್ನ ಪುತ್ಥಳಿಯಂತಿದ್ದ ಮಗಳು ನನ್ನ ಗಂಡುಮಗುವಾಗಿದ್ದರೆ! ಎಂಬ ಪ್ರಶ್ನಾರ್ಥಕ ಪ್ರಶ್ನೆಯಿಂದಾಗಿ ಅವನಲ್ಲಿ ಅದೆಷ್ಟೋ ವಿಚಾರಗಳು ಮೇಲೆ ಮೇಲೆ ಉದಯವಾಗುತ್ತಿದ್ದವು; ಮತ್ತು ಆ ಕೂಡಲೆ ಲಯವಾಗುತ್ತಿದ್ದವು. ಅವನ ಈ ಭಾವನೆಯ ಫಲವೋ, ಕುಂತಿಯ ಕಾಲ್ಗುಣವೋ ಏನೋ ಅನ್ನುವಂತೆ ಮಕ್ಕಳ ಬಗೆಗೆ ಉದಾಸೀನನಾಗಿದ್ದ ಕುಂತೀಭೋಜನಿಗೆ ಔರಸ ಮಕ್ಕಳುದಿಸ ಹತ್ತಿದರು. ತನಗೆ ಸಂತತಿಗಳಾ ದರೂ ಆತನು ಕುಂತಿಯನ್ನು ಕಡೆಗಣಿಸಲಿಲ್ಲ. ಆಕೆ ಉಪವರಳಾದಳೆಂದರೆ

ಶೂರ, ಕುಲೀನ ವಿದ್ಯಾವಂತನಿಗೆ ಆಕೆಯನ್ನು ಧಾರೆಯೆರೆದು ಕೊಟ್ಟುಬಿಡುವ ವಿಚಾರವವನದಿದ್ದಿತು. ಆ ಪ್ರಕಾರ ವರಶೋಧನೆಯೂ ನಡೆದಿದ್ದಿತು.

ಒಂದಾನೊಂದು ದಿನ ದೂರ್ವಾಸಋಷಿಗಳು ಕುಂತೀಭೋಜನಲ್ಲಿ ಆಗಮಿಸಿದರು. ಅವರು ಅದಾವುದೋ ಕಾರಣಕ್ಕಾಗಿ ಒಂದೆಡೆಗೆ ಒಂದು ವರುಷವಿದ್ದು ಅನುಷ್ಠಾನ ಮಾಡಬೇಕಾಗಿದ್ದಿತು. ಅದರ ದೆಸೆಯಿಂದಲೇ ಅವರು ಕುಂತೀಭೋಜನ ಅತಿಥಿಗಳಾಗಿ ಬಂದರು. ತಮ್ಮ ಆಗಮನದ ಉದ್ದೇಶವನ್ನು ರಾಜನಿಗೆ ತಿಳಿಸಿದರು.

ದೂರ್ವಾಸರು ಬಲುಸಿಟ್ಟಿನವರು. ಸಾಮಾನ್ಯವಾಗಿ ಎಲ್ಲರೂ ಅವರ ಈ ಸ್ವಭಾವಕ್ಕೆ ಹೆದರಿ ಹಿಂಜರಿಯುತ್ತಿದ್ದರು. ಕುಂತೀಭೋಜನು ಅವರ ಸ್ವಭಾವವನ್ನು ಚೆನ್ನಾಗಿ ಅರಿತಿದ್ದರೂ ನಿರ್ವಾಹವಿಲ್ಲದೆ ದೂರ್ವಾಸರನ್ನು ಸ್ವಾಗತಪಡಿಸಿಕೊಂಡನು. ಅವರ ನಿತ್ಯ ಸೇವೆಗಾಗಿ ಕುಂತಿಯನ್ನೇ ನೇಮಿಸಿದನು.

ಕುಂತಿಯು ವಯಸ್ಸಿನಿಂದ ಚಿಕ್ಕವಳಾದರೂ ಆಕೆಯಲ್ಲಿ ದೇವಬ್ರಾಹ್ಮಣರಲ್ಲಿ ನಿಸ್ಸೀಮವಾದ ಭಕ್ತಿಯು ಇದ್ದಿತು. ಈ ಶಿಕ್ಷಣವು ಆಕೆಗೆ ಮೊದಲಿನಿಂದಲೂ ದೊರೆತಿತ್ತು. ಆದುದರಿಂದಲೇ ಈಗ ಅವಳಿಗೆ ದೂರ್ವಾಸರ ಸೇವೆಯು ಅಷ್ಟೊಂದು ಕಠಿಣವೆನಿಸಲಿಲ್ಲ. ಅನುಷ್ಠಾನ-ಆಹ್ನಿಕ ಪ್ರಸಂಗಗಳಲ್ಲೆಲ್ಲ ಅವರ ಅನನ್ವಿತ ಆಜ್ಞೆ–ಅಪ್ಪಣೆಗಳು; ಊಟ-ಉಪಚಾರಗಳಲ್ಲಿ ಅವರ ಅನಿಯಮಿತ ವೇಳೆ, ತಮಗೆ ಆವಶ್ಯಕ ವಸ್ತುಗಳ ಕೊರತೆಯಾಗಲು ಸಿಟ್ಟು, ಹೆಚ್ಚಾದರೂ ಸಿಟ್ಟು ಇತ್ಯಾದಿ ಪ್ರತಿಯೊಂದು ಸಂದರ್ಭಗಳಲ್ಲಿ ಋಷಿಯ ಮನಸ್ಸು ಪ್ರಸನ್ನವಾಗುವಂತೆ ನಡೆಯುತ್ತಿದ್ದಳು. ಈ ತನ್ನ ಸೇವಾಧರ್ಮದಲ್ಲಿ ಸ್ವಲ್ಪವೂ ಸಹ ಅಂತರಿಸದೆ ಸಮಗ್ರ ವರುಷದ ವರೆಗೆ ಸೇವಕಿಯಾಗಿ ಆಚರಿಸಿದಳು. ಆಕೆಯ ನಿಸ್ಸೀಮ ಭಕ್ತಿಯಿಂದ ದೂರ್ವಾಸರು ಒಳ್ಳೆ ಆನಂದ ಹೊಂದಿದರು. ತಮ್ಮಲ್ಲಿ ಬಂದು ಹೋಗುತ್ತಿರುವ ಅದೆಷ್ಟೋ ಋಷಿರಾಜರುಗಳೆದುರು ಕುಂತಿಯು ಮಾಡಿದ ಗುರುಸೇವೆ, ಅತಿಥಿ ಸತ್ಕಾರಗಳನ್ನು ಬಾಯ್ತುಂಬ ಹೊಗಳುತ್ತಿದ್ದರು. ಕಡೆಗೊಂದು ದಿನ ಅವರು ಕುಂತಿಯನ್ನು ಕುರಿತು– "ಕುಮಾರಿ ಕುಂತಿಯೇ! ನೀನು ಇದುವರೆಗೆ ಶ್ರಮವೆನ್ನದೆ ನನ್ನ ಸೇವೆ ಕೈಕೊಂಡು ಕೊನೆಗಾಣಿಸಿದಿ. ಆದರಿಂದ ನಾನು ಬಹಳ ಸಂತುಷ್ಟ

ನಾದೆನು. ನೀನು ಇಚ್ಛಿಸುವ ವರವೇನು? ನನಗೆ ತಿಳಿಸು ಅದನ್ನು ಪೂರ್ಣ ಮಾಡುವೆನು" ಎಂದರು.

ದೂರ್ವಾಸರು ದಯಾನ್ವಿತ ವಚನಗಳಿಂದ ಕುಂತಿಯು ತನ್ನಲ್ಲಿ ಧನ್ಯತೆಯನ್ನು ಎಣಿಸಿದಳು. ಆಕೆ ಋಷಿಗಳಿಗೆ– "ಸ್ವಾಮಿನ್! ನಾನು ಏನೊಂದೂ ಫಲಾಪೇಕ್ಷೆಯನ್ನಿರಿಸಿಕೊಂಡು ನಿಮ್ಮ ಸೇವೆಯನ್ನು ಮಾಡಿಲ್ಲ. ನೀವು ಸಂತುಷ್ಟರಾದುದರಿಂದಲೇ ನನಗೆ ಬೇಕಾಗಿರುವ ಫಲಗಳೆಲ್ಲವೂ ಪೂರ್ಣವಾಗುವವೆಂದು ನನ್ನಲ್ಲಿ ದೃಢನಂಬುಗೆಯಾಗಿದೆ' ಎಂದಳು. ಆಗ ಋಷಿಗಳು– 'ಕುಂತೀ! ನಿನ್ನ ಅಭಿಪ್ರಾಯ ತಿಳಿಯಿತು. ಆದರೂ ನೀನು ಬಯಸದೆ ಇದ್ದರೂ ಕೂಡ ನಾನು ನಿನಗೊಂದು ವೇದಮಂತ್ರ ನೀಡುವೆನು; ಗ್ರಹಿಸು. ನೀನು ಆ ಮಂತ್ರಪ್ರಭಾವದಿಂದ ಬೇಕಾದ ದೇವನನ್ನು ಆಹ್ವಾನಿಸಿಕೊಳ್ಳಲು ಬರುವದು. ಕುಂತೀ! ಆ ಮಂತ್ರಪ್ರಭಾವವನ್ನು ಇನ್ನೂ ಹೇಳುವದಾದರೆ–ಆ ಮಂತ್ರದಿಂದ ನೀನು ಆಮಂತ್ರಿಸಿದ ದೇವನು ನಿನ್ನ ಸೇವೆ ಕೈಕೊಳ್ಳುವನು. ಮತ್ತು ನೀನು ಧರ್ಮದ ತಾಯಿಯಾಗುವಿ' ಎಂದು ಹೇಳಿ ಕುಂತಿಗೆ ಮಂತ್ರದ ಉಪದೇಶವನ್ನೇ ಮಾಡಿಬಿಟ್ಟರು. ಬಳಿಕ ದೂರ್ವಾಸರು 'ಮಗಳೇ! ಹೋಗು ಇನ್ನು ನಿನಗೆ ಕಲ್ಯಾಣವಾಗುವದು' ಎಂದು ಹೇಳಿ ಅಲ್ಲಿಂದ ಹೊರಡಲನುವಾದರು. ಆಗ ಅವರು ಕುಂತೀಭೋಜರಾಜನನ್ನು ಕುರಿತು—'ರಾಜ! ನಿನ್ನ ಮಗಳು ಮಾಡಿದ ಸೇವೆಯಿಂದ ಸಂತುಷ್ಟರಾದೆವು. ಇನ್ನು ನಾವು ಇಲ್ಲಿಂದ ಹೋಗುವೆವು" ಎಂದು ನುಡಿದು ರಾಜಭವನದಿಂದ ಹೊರಬಂದರು. ರಾಜನು ಹೊರದ್ವಾರಕ್ಕೆ ಸಂಗಡ ಬಂದು ನೋಡನೋಡುತ್ತಿರುವಷ್ಟರಲ್ಲಿ ಋಷಿಗಳು ಅಂತರ್ಧಾನರಾದರು. ಇದನ್ನು ಕಂಡು ರಾಜನು ಆಶ್ಚರ್ಯಚಕಿತನಾದನು.

## ಕರ್ಣನ ಜನನ

ದೂರ್ವಾಸರು ಹೋದನಂತರ ಕುಂತೀಭೋಜನು ತನ್ನ ಮಗಳನ್ನು ಕುರಿತು:—'ಕುಂತಿ! ನೀನು ಕೊಂಕಿಲ್ಲದೆ ದೂರ್ವಾಸರ ಸೇವೆಯನ್ನು ಮುಗಿಸಿದಿ. ಇದರಿಂದ ನಿಜಕ್ಕೂ ನನ್ನ ವಂಶದ ಕೀರ್ತಿಯನ್ನು ನೀನು ಬೆಳೆಸಿದಿ. ನೀನು ಪಡೆದ ಮಂತ್ರೋಪದೇಶದ ಫಲವಾಗಿ ನೀನು ಜಗತ್ತಿನಲ್ಲಿ ವೀರಮಾತೆಯಾಗಿ ಹೆಸರು ಪಡೆಯುವಿ. ಇನ್ನು ನೀನು ಗೃಹಕೃತ್ಯದ ಯಾವದೊಂದು ಕೆಲಸ ಮಾಡದೆ ಸ್ವಸ್ಥವಾಗಿದ್ದುಬಿಡು' ಎಂದು ನುಡಿದನು.

ತಂದೆಯ ಅನುಜ್ಞೆಯಂತೆ ಕುಂತಿಯು ನಿತ್ಯವೂ ಇನ್ನೊಂದು ಉಪಾಧಿಗೆ ಮನಸ್ಸುಮಾಡದೆ ನಿವಾಂತವಾಗಿದ್ದ ತನ್ನ ಮಹಲೊಂದರಲ್ಲಿ ಇರಹತ್ತಿದಳು. ಆಕೆಯ ಬಳಿಗೆ ಇನ್ನಾರೂ ಹೋಗುತ್ತಿರಲಿಲ್ಲ. ಮತ್ತು ಆಕೆಯ ವಿಚಾರದಲ್ಲಿ ದೂರ್ವಾಸರು, ಅವರು ಉಪದೇಶ ಮಾಡಿದ ಮಂತ್ರ, ಮಂತ್ರ ಪ್ರಭಾವದಿಂದ ಇಷ್ಟ ದೇವತೆಯ ಪ್ರಸನ್ನತೆ ಇವುಗಳ ಹೊರತು ಇನ್ನೊಂದಿರುತ್ತಿದ್ದಿಲ್ಲ. ಹೀಗೆ ಒಂದೇ ಮಾರ್ಗದ ವಿಚಾರಗಳನ್ನು ಆಳೆಯುತ್ತ ಆಕೆ ಕೆಲದಿನ ನಿಸ್ಸಂಗವಾಗಿ ಕಾಲಕಳೆದಳು. ಬಳಿಕೊಂದುದಿನ ಆಕೆ ತಾನು ಬೋಧೆ ಪಡೆದ ಮಂತ್ರಪ್ರಭಾವವನ್ನು ಒರೆಗ್ಗಚ್ಚುವ ನಿರ್ಣಯಕ್ಕೆ ಬಂದಳು. ಆದರೆ 'ಅದಾವ ದೇವನನ್ನು ಆಹ್ವಾನಿಸಲಿ!' ಎಂಬ ಪ್ರಶ್ನೆಯೇ ಆಕೆಯ ತಲೆಹಿಡಿಯಿತು. ಈ ವಿಚಾರದಲ್ಲಿಯೇ ಒಮ್ಮೆಲೆ ಆಕೆಯು ತೇಜಃಪುಂಜ ಸೂರ್ಯಮಂಡಲವನ್ನು ಕಂಡಳು. ಜಗಚ್ಚಕ್ಷುವೆನಿಸಿದ್ದ ಆ ಸೂರ್ಯನನ್ನು 'ಇವನು ಬ್ರಹ್ಮ-ವಿಷ್ಣು-ರುದ್ರಾತ್ಮನು' ಎಂಬ ಭಾವನೆಯ ಪ್ರಧಾನದಿಂದ ಆ ಕೂಡಲೆ ಆಹ್ವಾನಿಸಿದಳು

ಕುಂತಿಯು ಸೂರ್ಯನನ್ನು ಸ್ಮರಣೆಯಲ್ಲಿ ತರುವದೊಂದೇ ತಡ ತನ್ನ ಏಕ ಚಕ್ರರಥಕ್ಕೆ ಸಪ್ತಾಶ್ವಗಳನ್ನು ಹೂಡಿಕೊಂಡು ಸೂರ್ಯನು ಕೂಡಲೆ ಅಲ್ಲಿ ಬಂದಿಳಿದನು. ಕುಂತಿಯ ಎದುರಿನಲ್ಲಿನಿಂತು— 'ರಾಜಪುತ್ರಿ! ಏನಪ್ಪಣೆ? ನಿನ್ನ ಇಷ್ಟವಾದ ಕಾರ್ಯವೇನು?' ಎಂದು ಕೇಳಿದನು. ಆ ಕೂಡಲೆ ಕುಂತಿಯು— 'ಭಗವನ್! ನಾನು ಕೇವಲ ಕುತೂಹಲದಿಂದಲೇ ನಿಮ್ಮನ್ನು ಆಹ್ವಾನಿಸಿದೆನು. ಇನ್ನು ಮೇಲೆ ನೀವು ಇಲ್ಲಿಗೆ ಸಾಗಿಬಂದಂತೆ ತಿರುಗಿ ನಿಮ್ಮ ಸ್ಥಾನಕ್ಕೆ ಹೋಗಿರಿ. ಇದಿಷ್ಟೇ ನನ್ನಮೇಲಿನ ದಯೆ ಸಾಕು' ಎಂದು ಕೈಮುಗಿದು ನುಡಿದಳು. ಆಗ ರವಿಯು:—'ರಾಜಕನ್ಯೆ! ಇಲ್ಲಿಂದ ಹೋಗುವದೂ ಬಿಡುವದೂ ನನ್ನ ಇಚ್ಛೆ. ಆದರೆ ನೀನು ನನ್ನಲ್ಲಿ ದೇವತ್ವವನ್ನು ಮನ್ನಿಸಿ ನನ್ನನ್ನು ಆಹ್ವಾನಿಸಿದಿ. ಈಗ ಹೊರಟುಹೋಗಲು ಹೇಳುವಿ. ಇದು ನನ್ನ ಮನಸ್ಸಿಗೆ ಒಪ್ಪದ ಮಾತಾಯಿತು. ಒಂದು ವೇಳೆ ನೀನು ನನ್ನನ್ನು ಪ್ರಸನ್ನೀಕರಿಸಿಕೊಂಡದ್ದಾದರೆ ನನ್ನ ಪ್ರಸಾದದಿಂದ ನಿನಗೊಬ್ಬ ಅತ್ಯಂತ ಶೂರನೂ ಕವಚ-ಕುಂಡಲಗಳಿಂದ ಯುಕ್ತನೂ ಆಗಿರುವ ಮಗನು ಜನಿಸುವನು. ಆ ನಿನ್ನ ಮಗನು ಕೇವಲ ನನ್ನ ಸ್ವರೂಪದವನೇ ಆಗುವನು. ಈ

ಮಾತನ್ನು ನೀನು ಅಲ್ಲಗಳೆದರೆ ನನ್ನ ಶಾಪವನ್ನು ಹೊಂದಬೇಕಾಗುವದು. ಇಷ್ಟೇ ಅಲ್ಲ. ನಿನ್ನ ತಂದೆಯನ್ನೂ ನಿನಗೆ ಮಂತ್ರೋಪದೇಶ ನೀಡಿದ ದೂರ್ವಾಸನನ್ನೂ ಸುಡುಸುಳಿಸಿ ಬಿಡುವೆನು. ಇವೆಲ್ಲವನ್ನೂ ನೀನು ವಿಚಾರ ಮಾಡು. ಕುಂತೀ! ನಿನಗೆ ಇನ್ನೂ ತಿಳಿಸುವದೇನೆಂದರೆ—ಈಗಲೇ ನಿನಗೆ ದಿವ್ಯದೃಷ್ಟಿಯನ್ನು ಕೊಟ್ಟಿರುವೆನು. ಅದರಿಂದ ನೀನು ಇಲ್ಲಿಯೇ ಇದ್ದು ಕೊಂಡು ಸ್ವರ್ಗದಲ್ಲಿಯ ಇಂದ್ರಾದಿ ದೇವತೆಗಳನ್ನು ಕಾಣುವಿ. ಪರೀಕ್ಷಿಸು' ಎಂದು ನುಡಿದನು. ಕುಂತಿಯು ಆಗಲೇ ತನಗೆ ದೊರೆತ ದಿವ್ಯದೃಷ್ಟಿಯಿಂದ ಸುರಲೋಕದತ್ತ ನೋಡಿದಳು. ಸೂರ್ಯನು ಹೇಳಿದಂತೆ ಆಕೆಗೆ ಎಲ್ಲ ದೇವತೆ ಗಳೂ ಕಣ್ತುಂಬಾ ಕಂಡರು. ಅದರಿಂದ ಆಕೆಗೆ ಸೂರ್ಯನು ವಚನವಿತ್ತ ಮಾತುಗಳಲ್ಲೆಲ್ಲ ನಂಬುಗೆ ಹುಟ್ಟಿತು. ಆದರೆ ಮಾಡುವಳೇನು? ಮನಲಜ್ಜೆ ಯನ್ನು ಆಕೆ ಹತ್ತಿಕ್ಕಿದರೂ ಜನಲಜ್ಜೆಯೂ, ತನ್ನವರ ಭಯವೂ ಆಕೆ ಯನ್ನು ಬಾಧಿಸಹತ್ತಿದವು. ಆದ ಕಾರಣದಿಂದಲೇ ಆಕೆ ಮತ್ತೆ ಸೂರ್ಯನಿಗೆ 'ನೀವು ಇಲ್ಲಿಂದ ಈಗಲೇ ಹೋಗಿರಿ' ಎಂದು ಹೇಳಿದಳು. ಮತ್ತೂ ಆಕೆ— 'ನನ್ನ ತಾಯಿ ತಂದೆಗಳು ವಿವಾಹ ಧರ್ಮಕ್ಕನುಸರಿಸಿ ನನ್ನನ್ನು ನಿಮಗೆ ಧಾರೆಯೆರೆದುಕೊಟ್ಟರೆ ಸಂತೋಷದಿಂದ ನಿಮಗೆ ಆತ್ಮದಾನ ನೀಡುತ್ತಿದ್ದೆನು. ಇದನ್ನು ಮಿಕ್ಕಿ ನೀವು ಬಲಾತ್ಕರಿಸಿದರೆ ನನ್ನ ಉಪಾಯವಿಲ್ಲ. ಯಾವದೇ ಬಗೆಯಾವರೂ ನೀವು ನನ್ನ ಎರಡು ಬಯಕೆಗಳನ್ನು ಪೂರೈಸಬೇಕಾ ಗುವದು. ನನ್ನ ಪಾತಿವ್ರತ್ಯವು ಭಂಗವಾಗಕೂಡದು ಮತ್ತು ನೀವು ಹೇಳಿದ ಲಕ್ಷಣವುಳ್ಳ ಮಗನು ಜನಿಸಬೇಕು. ಇವೇ ನನ್ನ ಬಯಕೆಗಳು' ಎಂದಳು. ಸೂರ್ಯನು ಕುಂತಿಯ ಎರಡೂ ಬೇಡಿಕೆಗಳಿಗೆ ಒಪ್ಪಿ ಕುಂತಿಯೊಡನೆ ಒಂದುಗೂಡಿದನು.

ತನ್ನನ್ನು ಸೇರಿದ ಸೂರ್ಯನ ತೇಜದಿಂದ ಕುಂತಿಯು ಮೂರ್ಛಿತಳಾದಳು. ಆ ಸ್ಥಿತಿಯಲ್ಲಿಯೇ ಆಕೆಯನ್ನು ಸೂರ್ಯನು ಬಿಟ್ಟು ಹೊರಡಲನುವಾದನು. ಕಡೆಗೆ ತಾನೇ ಒರಗಿದ್ದ ಕುಂತಿಯ ಬಳಿಗೆ ಬಂದು—'ಎಲೈ ಕೀರ್ತಿವಂತಳೆ! ನಾನಿನ್ನು ಹೋಗುವೆನು; ನಿನ್ನ ಅಪೇಕ್ಷೆಯಂತೆ ಶಸ್ತ್ರಧಾರಿಗಳಲ್ಲಿ ಶ್ರೇಷ್ಠ ಮಗನು ನಿನಗೆದೊರಕುವನು. ಮತ್ತು ನೀನು ಕನ್ಯೆಯಾಗಿಯೇ ಉಳಿಯುವಿ. ನೆನಪಿಡು' ಎಂದು ಹೇಳಿ ಹೋದನು.

ಸಾಕ್ಷಾತ್ ಸೂರ್ಯ ಸಂಗಮದಿಂದ ಕುಂತಿಯು ತೇಜಸ್ವತಿಯಾದಳು. ಅಂದಿನಿಂದಲೇ ಆಕೆಯಲ್ಲಿ ಗರ್ಭ ಮೂಡಿತು; ಬೆಳೆಯಿತು. ತಾನಿನ್ನೂ ಕನ್ಯೆಯಾಗಿದ್ದು ಬಸಿರಾದುದಕ್ಕೆ ಆಕೆಯಲ್ಲಿ ಭಯ-ಲಜ್ಜೆಗಳು ಉಂಟಾದವು. ತಾನು ಗರ್ಭಧಾರಣ ಮಾಡಿಕೊಂಡ ಸಂಗತಿಯನ್ನು ಅವಳು ಅವಾರಿಗೂ ತಿಳಿಸಲಿಲ್ಲ; ಮಾತ್ರ ತನ್ನ ನಂಬುಗೆಯ ದಾಸಿಯೊಬ್ಬಳಿಗೆ ತಿಳಿಸಿದ್ದಳು. ಹೀಗೆ ಇರುತ್ತಿರಲು ಮುಂದೆ ಆಕೆಯ ಗರ್ಭಕ್ಕೆ ನವಮಾಸಗಳು ಪೂರ್ಣವಾದವು; ಪ್ರಸವಕಾಲ ಪ್ರಾಪ್ತವಾಗಿ ಪುತ್ರರತ್ನವನ್ನೇ ಹೆತ್ತಳು.

ಜನಿಸಿದ ಮಗುವು ಸೂರ್ಯನ ಹೇಳಿಕೆಯಲ್ಲಿ ಒಂದಂಶವೂ ಕೂಡ ನ್ಯೂನತೆಯಿಲ್ಲದಿದ್ದಿತು. ತನ್ನ ಕೂಸನ್ನು ಆಕೆ ಪ್ರೇಮಮಯ ದೃಷ್ಟಿಯಿಂದ ಕಂಡಳು. ಹರ್ಷಗೊಂಡಳು. ತತ್‌ಕ್ಷಣವೇ ನಿಡಿದಾದ ಉಸಿರನ್ನು ಬಿಟ್ಟಳು. ಕಡೆಗೆ ಜನಲಜ್ಜೆ-ತನ್ನವರ ಅಂಜಿಕೆಗಳು ಆಕೆಯನ್ನು ಮಗುವಿನ

ಅಣಿಮಾಡಿದವು. ಕೂಡಲೆ ಆಕೆ ತನ್ನ ನಂಬುಗೆಯ ಆ ದಾಸಿಯನ್ನು ಕರೆದು— "ಈ ನನ್ನ ಕಂದಮ್ಮನನ್ನು ಸರಿನ್ಮಾತೆಯ ಮಡಿಲಲ್ಲಿ ಹಾಕಬೇಕು, ಇಲ್ಲವಾದರೆ ಈಗಲೇ ನಾನು ಆತ್ಮಘಾತಮಾಡಿಕೊಳ್ಳಬೇಕು. ಈ ಎರಡು ಮಾರ್ಗಗಳು ನನ್ನ ದೃಷ್ಟಿಗೆದುರು ನಿಂತಿವೆ. ನಾನಾವುದನ್ನು ಅನುಸರಿಸಲಿ!"ಎಂಬವಿಚಾರವನ್ನಿಟ್ಟಳು ದಾಸಿಯುತಾನುಏನೊಂದನ್ನುಹೇಳಿ ಪಾಪಕಟ್ಟಿಕೊಳ್ಳಲು ಒಪ್ಪದೆ— "ದೇವಿ! ಈ ಕಂದಮ್ಮನನ್ನು ಭದ್ರವಾದ ಬೆತ್ತದ ಕರಡಿಗೆಯಲ್ಲಿರಿಸಿ ನೀವು ಹೇಳಿದಂತೆ ಹೊಳೆಯಲ್ಲಿ ತೇಲಿಬಿಡುವದು ಒಂದು ವೇಳೆ ಸರಿಯಾಗಬಹುದು. ಯಾಕಂದರೆ ನೀರಲ್ಲಿ ತೇಲಿಹೋದ ಮಗುವು ಯಾವನೊಬ್ಬ ಪುಣ್ಯಾತ್ಮನ ಕೈಸೇರಿ ರಕ್ಷಿತವಾದರೆ ನಿಮಗೆ ಏನೊಂದು ದೋಷ ತಟ್ಟಲಾರದು. ಆತ್ಮಘಾತಕ್ಕಿಂತಲೂ ಇದು ಉಚಿತವೆಂದು ನನ್ನ ಮತ. ನೀವು ಸರಿನ್ಮಾತೆಯ ಮಡಲಿಗೇ ಒಪ್ಪಿಸಲು ಸಿದ್ಧರಾದರೆ ಬಾಲಕನನ್ನು ಇರಿಸಿ ಪ್ರವಾಹದಲ್ಲಿ ಬಿಡುವದಕ್ಕಾಗಿ ಭದ್ರ ಕರಡಿಗೆ ತರುವೆನು. ಅಪ್ಪಣೆ ನೀಡಿರಿ" ಎಂದು ನುಡಿದು ಅಪ್ಪಣೆ ಪಡೆದು ಬುಟ್ಟಿಯನ್ನು ತಂದಳು. ರಾತ್ರಿಯ ಸಮಯವನ್ನು ಕುಂತಿ - ದಾಸಿ ಇವರಿಬ್ಬರೂ ನಿರೀಕ್ಷಿಸಿದರು. ರಾತ್ರಿಯಾಯಿತು. ಬೆಳಕೆನ್ನದೆ, ಕತ್ತಲೆಯೆನ್ನದೆ, ಕಲ್ಲು - ಮುಳ್ಳೆನ್ನದೆ ಇಬ್ಬರೂ ಆ ಮಗನನ್ನು ಕರಡಿಗೆಯಲ್ಲಿ ಹಾಕಿ ತೆಗೆದುಕೊಂಡು

ಅಶ್ವನದೀ ತೀರಕ್ಕೆ ಬಂದರು. ಕರಂಡಕವನ್ನಿಳುಹಿ ಅಳುತ್ತ ಕುಳಿತರು. ಕುಂತಿಯು ಕರಡಿಗೆಯ ಬಾಯಿಯನ್ನು ತೆಗೆದಳು. ಒಳಗೆ ಸೂರ್ಯ ತೇಜದಿಂದೊಪ್ಪುವ, ಕುಲು ಕುಲು ನಗುವ ಮಗನ ಮುಖಕ್ಕೆ ಮುದ್ದಿಟ್ಟಳು. ಮಗನನ್ನು ಸರಿತ್ಮಾತೆಗೆ ನೀಡುವ ಮೊದಲು ಧರ್ಮೋದಕವೆಂದು ತನ್ನ ನೀಳ್ದವಾದ ಕಣ್ಣುಗಳಿಂದ ಮಗನ ಮೇಲೆ ಅಶ್ರುವನ್ನು ಉದುರಿಸಿದಳು. ಕತ್ತಲೆಯ ರಾತ್ರಿಯಲ್ಲಿ ನಕ್ಷತ್ರಗಳ ಬೆಳಕನ್ನು ವರ್ಧಿಸುವ ಬಾಲಕನ ಮುಖವನ್ನು ಮತ್ತೆ ಮತ್ತೆ ನೋಡಿದಳು. ಕರಡಿಗೆಯನ್ನು ಇನ್ನೊಂದು ಬಾರಿ ನಿರೀಕ್ಷಿಸಿದಳು. ಮಗನನ್ನೆತ್ತಿಕೊಂಡು ಕೊನೆಯ ಹಾಲಿಂದು ಮೊಲೆ ಉಣಿಸಿದಳು. ಕರಡಿಗೆಯಲ್ಲಿ ಮಲಗಿಸಿ ಅದರ ಬಾಯಿಯನ್ನು ಮುಚ್ಚಿದಳು. ಇನ್ನು ಆ ಕರಡಿಗೆಯನ್ನು ಕುಂತಿ ದಾಸಿಯರು ಎತ್ತಬೇಕೆಂದು ಪ್ರಯತ್ನ ಮಾಡ ಹತ್ತಿದರು. ಅವರ ಕೈಗಳು ಆ ಕೆಲಸಕ್ಕೆ ಒಪ್ಪದಾದವು. ಮತ್ತೆ ಅಳುತ್ತ ನಿಂತರು, ಮತ್ತೆ ಪ್ರಯತ್ನಿಸಿದರು. ಹೀಗೆಯೇ ಅವರಲ್ಲಿಯ ಮೋಹವು ಅವರನ್ನು ಏನೊಂದೂ ಕ್ರಿಯೆಯನ್ನು ಮಾಡಲು ಪ್ರೇರೇಪಿಸದಂತಾಯಿತು. ಇಬ್ಬರೂ ಬಿಕ್ಕಿ ಬಿಕ್ಕಿ ಅಳಹತ್ತಿದರು.

ಅಷ್ಟರಲ್ಲಿ ರಾತ್ರಿಯ ಮೂರನೆಯ ಜಾವವು ಮುಗಿಯಿತು. ಕೊನೆಯ ಜಾವವು ಬರುವದೆಂಬ ಸೂಚನೆಯನ್ನು ಮಂದಮಾರುತನು ತಂದು ಬೀಸಹತ್ತಿದನು. ಕೋಳಿಗಳು ಮುಂದೆ ಬರತಕ್ಕ ರವಿಯ ಆಗಮನದ ಸ್ವಾಗತಕ್ಕೆಂದು ಕು ಕ್ಕೂ ಕ್ಕೂsss ಎಂದು ಕೂಗ ಹತ್ತಿದವು.

ಕುಂತಿ ಹಾಗು ದಾಸಿಯು ರಾತ್ರಿಗಳೆದುದನ್ನು ತಿಳಿದರು. ಅವರ ಮೈ ಜುಮ್ಮೆಂದಿತು. ಕಿವಿಗಳು ಬೆಳಗಿನ ಸೂಚನೆಯನ್ನು ಕೇಳಿದವು. ಇನ್ನು ಅವಕಾಶವಾದಲ್ಲಿ ಎಲ್ಲವೂ ವಿಪರೀತವಾಗುವದೆಂದರಿತು ಆ ಕೂಡಲೆ ಕರಂಡಕವನ್ನೊಯ್ದು ಪ್ರವಾಹದಲ್ಲಿಟ್ಟರು. ಕುಂತಿಯು ಆಕಾಶದ ಕಡೆಗೆ ಕೈ ಮುಗಿದು– 'ನನ್ನ ಪ್ರಿಯ ರವಿಯೇ! ಇದೆಲ್ಲವು ನಿನ್ನ ಪ್ರಸಂಗದಪರಿಣಾಮವು, ಇನ್ನು ಈ ನಿನ್ನ ಮಗನ ರಕ್ಷಣೆಯ ಎಲ್ಲ ಭಾರವು ನಿನ್ನದೇ ಇರುವದೆಂದು ನಾನು ನಿನಗೆ ಹೇಳಬೇಕಾಗಿಲ್ಲ' ಎಂದು ನುಡಿದಳು. ಮತ್ತು ದಾಸಿಯೊಡನೆ ಮನೆಗೆ ತಿರುಗಿದಳು. ಹೋಗ ಹೋಗುತ್ತ ಮಾರ್ಗದಲ್ಲಿ ಕಣ್ಣೀರಿರಚುತ್ತ ತನ್ನ ನಿವಾಂತ ಮಹಲಿಗೆ ಬಂದಳು. ತನ್ನ ಅದೃಷ್ಟವನ್ನು ಹೀಗಳೆಯುತ್ತ

ಸೂರ್ಯದೇವನು ತನಗಿತ್ತ ಪ್ರಸಂಗವನ್ನು ಸ್ಮರಿಸುತ್ತ ಇರುವಷ್ಟರಲ್ಲಿಯೇ ರವಿಯುದಯವಾಯಿತು.

## ಸೂತಕುಲದಲ್ಲಿ ಕರ್ಣ

ಕೃತ್ರಿಮ ಬಗೆಯಿಂದ ನಿರ್ದಯ ಭಾವನೆಯನ್ನು ತಾಳಿ ಕುಂತಿಯು ಮಗುವನ್ನು ಹೊಳೆಯಲ್ಲಿ ತೇಲಿಬಿಟ್ಟು ಮನೆಗೆ ಹೋದಳು. ಸರಿನ್ಮಾತೆಯು ತನಗೊಪ್ಪಿತವಾದ ಆ ಮಗುವಿನ ಕರಡಿಗೆಯನ್ನು ಹಾಗೇ ಸಾಗಿಸಿಕೊಳ್ಳುತ್ತ ನಡೆದಳು. ಸುಳಿಗಾಳಿ ಬೀಸುವ ಸಮಯದಲ್ಲಿ ನದಿಯ ತೆರೆಗಳು ಲಘುತ್ವವನ್ನು ತಾಳಿ ಪ್ರವಾಹಕ್ಕೆ ಮಾಂದ್ಯತ್ವವನ್ನುಂಟು ಮಾಡಿದವು. ಅಶ್ವನದಿಯ ಮಂದಪ್ರವಾಹದಲ್ಲಿಯೇ ಆ ಕರಡಿಗೆಯು ತೇಲುತ್ತ ತೇಲುತ್ತ ಚರ್ಮಣ್ವತಿ ನದಿಯನ್ನು ಪ್ರವೇಶಿಸಿತು. ಆ ನದಿಯೂ ಕೂಡ ತನ್ನ ಮಂದಗತಿಯಿಂದ ಬಾಲಕನ ಕರಡಿಗೆಯನ್ನು ಮುಂದೆ ಸಾಗಿಸಿ ಯಮುನೆಯ ಪ್ರವಾಹಕ್ಕೆ ತಂದಿಳಿಸಿತು. ಯಮುನೆಯೂ ಆ ಬಾಲಕನನ್ನು ಪುಣ್ಯಪಾವನೆ ಗಂಗಾನದಿಯಲ್ಲಿಗೆ ಕಳಿಸಿದಳು.

ಇಂತು ಅಶ್ವನದಿಯಿಂದ ಸಾಗಿದ ಕರಂಡಕವು ಮೂರು ನದಿಗಳನ್ನು ದಾಟಿ ನಾಲ್ಕನೆಯದಾದ ಗಂಗೆಯಲ್ಲಿ ಪ್ರವೇಶಿಸಿತು.

ಗಂಗಾತೀರದಲ್ಲಿ "ಚಂಪಾ" ಎಂಬದೊಂದು ಗ್ರಾಮವು. ಆ ಊರ ಮುಂದಿನ ಮಂದಪ್ರವಾಹದಲ್ಲಿ ಕರಂಡಕ ತೇಲಿ ಬರುತ್ತಲಿದೆ. ಕೇವಲಕಂಬಿಗರಾದ ಸಾರಥಿಗಳಿಂದ ಆ ಚಂಪಾಪುರವು ತುಂಬಿದ್ದಿತು. ಅದಕ್ಕಾಗಿಯೇ ಅದಕ್ಕೆ 'ಸಾರಥಿಪುರ' ಅಥವಾ ಸೂತಪುರವೆಂದು ಹೆಸರಿದ್ದಿತು. ಕರಂಡಕವು ತೇಲಿ ಅಲ್ಲಿಗೆ ಬಂದಾಗ ಆ ಸೂತಪುರದ ಅಧಿರಥನೆಂಬ ಸೂತನು ಪ್ರವಾಹದಲ್ಲಿ ಮೀನಿನ ಶಿಕಾರಿಯಾಡುತ್ತಿದ್ದನು. ಅವನ ನಾವೆಯ ಬಳಿಗೆ ತೇಲಿಬಂದ ಕರಂಡಕವನ್ನು ಆತನು ಒಳ್ಳೆ ಜಾಣತನದಿಂದ ಹಿಡಿದು ಅದನ್ನು ತನ್ನ ನಾವೆಯಲ್ಲಿರಿಸಿಕೊಂಡನು. ಭದ್ರವಾದ ಆ ಕರಂಡಕದ ಮುಚ್ಚಳವನ್ನು ಎಚ್ಚರದಿಂದ ತೆರೆದನು. ಒಳಗಿರುವ ತೇಜೋವಂತ ಬಾಲಕನನ್ನು ಕಂಡನು. ಸಾವಕಾಶವಾಗಿ ಎತ್ತಿ ಮುದ್ದಿಟ್ಟನು ಮತ್ತು ಆ ಕೂಡಲೆ ಲಗುಬಗೆಯಿಂದ ನಾವೆಯನ್ನು ದಂಡೆಗೆ ತಂದು ನಿಲ್ಲಿಸಿದನು. ಆ ಬಾಲಕನನ್ನು ಮಡಿಲಲ್ಲಿರಿಸಿಕೊಂಡು ತನ್ನ ಮನೆಗೆ ತೆರಳಿದನು.

ರಾಧೆಯು ಅಧಿರಥನ ಹೆಂಡತಿಯು. ಅಧಿರಥನಿಗೆ ವಯಸ್ಸಾಗಿದ್ದರೂ ಇದುವರೆಗೆ ಆ ದಂಪತಿಗಳಿಗೆ ಮಕ್ಕಳಾಗಿರಲಿಲ್ಲ. ಧೃತರಾಷ್ಟ್ರನ ಸ್ನೇಹಿತನಾಗಿದ್ದ ಆ ಅಧಿರಥನಿಗೆ ಮಕ್ಕಳಿಲ್ಲದುದೊಂದೇ ಚಿಂತೆಯಿದ್ದಿತು. ನದಿಯಲ್ಲಿ ತೇಲಿಬಂದ ಮಗನನ್ನು ತೆಗೆದುಕೊಂಡು ಬಂದು ಮನೆ ಮುಟ್ಟಿದನು. ರಾಧೆಯು ಪುತ್ರಪ್ರಾಪ್ತಿಗಾಗಿ ಕುಲದೇವತೆಯೆದುರು ಕೈ ಮುಗಿದುಕೊಂಡು ಕುಳಿತಿರುವಳು. ಅಷ್ಟರಲ್ಲಿ ಅಧಿರಥನು ಬಂದು ಬಾಗಿಲು ತಟ್ಟಿ "ರಾಧೇ! ಬಾಗಿಲು ತೆರೆ, ಗಂಗಾದೇವಿಯು ಇಂದು ನಮ್ಮ ಮೇಲೆ ಅನುಗ್ರಹ ಮಾಡಿರುವಳು" ಎಂದೆನ್ನುವಷ್ಟರಲ್ಲಿ ರಾಧೆಯು ತೀವ್ರವೇ ಬಂದು ಬಾಗಿಲು ತೆರೆದು ನೋಡುತ್ತಾಳೆ, ಪತಿಯ ಮಡಿಲಲ್ಲಿ ಸೂರ್ಯತೇಜದಿಂದೊಪ್ಪುವ ಬಾಲಕನನ್ನುಕಂಡು ಚಕಿತಳಾದಳು. "ನಾವು ಇಹಜನ್ಮದಲ್ಲಿ ಕಾಣದ ಈ ದುರ್ಲಭ ವಸ್ತುವು ನಿಮಗೆ ದೊರಕಿದುದೆಂತು?" ಎಂದು ನುಡಿದು ಕೂಡಲೆ ಕೂಸನ್ನೆತ್ತಿಕೊಂಡು ಎದೆಗವಚಿಕೊಂಡಳು. ಪುತ್ರಸ್ನೇಹವು ಮಿಕ್ಕಿ ಆಕೆಯು ಕೂಡಲೆ ತನ್ನ ಮೊಲೆಯನ್ನು ಅದರ ಬಾಯಿಯಲ್ಲಿಕ್ಕಿದಳು. ಮಗುವು ಅಳದೆ, ಕರೆಯದೆ, ರಾಧೆಯ ಮೊಲೆಯನ್ನು ಭರದಿಂದ ಉಣ್ಣಹತ್ತಿತು. ಹುಟ್ಟಾಬಂಜೆಯಾಗಿದ್ದ ತನ್ನ ಮೊಲೆಯಲ್ಲಿ ಹಾಲು ಸುರಿಯುವದನ್ನು ತಿಳಿದು ಆಕೆ ದಿಙ್ಮೂಢಳಾದಳು. ಜಗತ್ತಿಗೆ ಇದು ಹೊಸತು ಎಂದು ಆಶ್ಚರ್ಯಪಟ್ಟು ತನ್ನ ಗಂಡನನ್ನು ಕುರಿತು "ಈ ಕಂದಮ್ಮನು ನಮಗೆ ಅದೆಲ್ಲಿಂದ?" ಎಂದು ಕೇಳುತ್ತಿರುವಷ್ಟರಲ್ಲಿಯೇ ಅಧಿರಥನು "ರಾಧೇ! ಹಡೆಯದೆ ಮಕ್ಕಳು; ಪಡೆಯದೆ ಭಾಗ್ಯವು. ಇವು ಪುಣ್ಯವಂತರಿಗೆ ದೊರಕುವವೆಂದು ಹಿರಿಯರು ಹೇಳುವರು. ಆ ವೃದ್ಧವಾಕ್ಯವು ನಮ್ಮ ಮಟ್ಟಿಗೆ ಇಂದು ನಿಜವಾಯಿತು. ಈ ಕಂದಮ್ಮನಿಂದ ಕಮರಿ ಬಿದ್ದಿದ್ದ ನಮ್ಮ ಬಾಳಿನ ಭಾಗ್ಯಲತೆಯು ಮುಗುಳೊಡೆಯಿತು. ರಾಧೆ! ಈ ಮಗುವಿನ ಲಕ್ಷಣವು ಅಸಾಮಾನ್ಯವಾಗಿ ತೋರುವದು. ಇವನನ್ನು ನಾವು ನಮ್ಮ ಪ್ರಾಣಗಳಿಗಿಂತಲೂ ಅಧಿಕಪ್ರೇಮದಿಂದ ಸಲಹಿ ಕಾಪಾಡೋಣ. ಸ್ವಾಭಾವಿಕವಾಗಿ ಈ ಮಗುವಿಗಿದ್ದ ಕರ್ಣ-ಕುಂಡಲಗಳಿಂದಲೂ ಕವಚದಿಂದಲೂ ನಿಜಕ್ಕೂ ಈತನು ದೇವಾಂಶನು. ಬಹಳ ಹೇಳುವದೇನು? ಈ ಮಗುವೇ ನಮ್ಮ ಮಗನು. ಇವನಿಂದಲೇ ನಮ್ಮ ಜನ್ಮ ಹಾಗು ವಂಶ ಉದ್ಧಾರ; ಇದನ್ನು ನಿಶ್ಚಿತವಾಗಿ ಗ್ರಹಿಸು" ಎಂದು ರಾಧೆಗೆ ಹೇಳಿದನು.

ಅಧಿರಥ-ರಾಧೆಯರ ಮಾತು ನಡೆದಂತೆ ಮಗುವು ಅವರಿಬ್ಬರ ಮುಖಗಳನ್ನು ನೋಡುತ್ತ ಮೊಲೆಯುಣ್ಣುತ್ತ ರಾಧೆಯ ತೊಡೆಯ ಮೇಲೆ ಮಲಗಿತು.

ಬಳಿಕ ರಾಧೆಯ ಸೂಚನೆಯಂತೆ ಅಧಿರಥನು ಬ್ರಾಹ್ಮಣರನ್ನು ಕರೆಸಿ ಆ ಬಾಲಕನಿಗೆ ನಾಮಕರಣ ಸಂಸ್ಕಾರ ಮಾಡಿಸಿದನು. ಬ್ರಾಹ್ಮಣರು-ಬಾಲಕನು ಕವಚ-ಕುಂಡಲಾಭರಣಗಳಿಂದ ಕೂಡಿಯೇ ಜನಿಸಿರುವದರಿಂದ ಇವನಿಗೆ "ವಸುಷೇಣ" ಎಂಬ ಹೆಸರು ಒಪ್ಪುವದೆಂದು ಹೇಳಿ ಆ ಹೆಸರನ್ನಿಡಿಸಿದರು. ಅಧಿರಥನು ಬ್ರಾಹ್ಮಣರಾದಿಯಾಗಿ ದಕ್ಷಿಣೆಕೊಳ್ಳಲರ್ಹರಾದವರಿಗೆಲ್ಲ ಕೈ ಬಿಚ್ಚಿ ದಾನದಕ್ಷಿಣೆ ನೀಡಿದನು.

ಇಂತು ಅಧಿರಥಸೂತನ ಕೈಗೆ ಸಿಕ್ಕ ಆ ಬಾಲಕನು 'ವಸುಷೇಣ'ಎಂಬ ಹೆಸರಿನಿಂದ ಕರೆಯಲ್ಪಟ್ಟನು. ಮುಂದೆ ಕಾಲಕಾಲಕ್ಕೆ ಇವನಿಗೆ ಮತ್ತೆ ಬೇರೆ ಹೆಸರುಗಳು ರೂಢವಾದವು. ರಾಧೆಯ ಮೊಲೆಯುಂಡು ಬೆಳೆದ ಇವನಿಗೆ "ರಾಧೇಯ" ನೆಂದೂ ಸಾರಥಿಯ ಮನೆಯಲ್ಲಿ ಬೆಳೆದ ಇವನನ್ನು 'ಸೂತಪುತ್ರ' ನೆಂದೂ ಕರೆಯಹತ್ತಿದರು. ಆದರೂ ಮುಂದೆ ಇವನು ಕೌರವರಲ್ಲಿ ಪ್ರವೇಶ ಮಾಡಿದ ನಂತರ 'ಕರ್ಣ' ನೆಂದು ಸಂಬೋಧಿಸಲ್ಪಟ್ಟು ಭಾರತೀಯ ವೀರನೆನ್ನಿಸಿದನು. ಇಡಿಯ ಭಾರತವೆಲ್ಲ ಕರ್ಣ ನಾಮಾಭಿಧಾನದಿಂದಲೇ ಉಲ್ಲೇಖಿತನಾಗಿರುವದು. ಇನ್ನು ಮುಂದೆ ನಾವಾದರೂ ಈ ಚರಿತ್ರೆ ಮುಗಿವವರೆಗೆ "ಕರ್ಣ" ಎಂದೇ ಬರೆಯುವೆವು.

## ಗುರುಕುಲದಲ್ಲಿ ಕರ್ಣ

ಕರ್ಣನು ಅಧಿರಥ-ರಾಧೇಯರಿಂದ ರಕ್ಷಿತನಾಗಿ ದಿನದಿನವೂ ಬಿದಿಗೆಯ ಚಂದ್ರನೋಪಾದಿ ಬೆಳೆಯಹತ್ತಿದನು. ಕಾಲಕಳೆದು ಆತನ ವಿದ್ಯಾರ್ಥಿದೆಸೆಗೆ ಬಂದು ಮುಟ್ಟಿದನು. ಚಂಪಾಪುರವು ಕೇವಲ ಸಾರಥಿ ಜನರ ಬೀಡಾದುದರಿಂದ ಅಲ್ಲಿಯ ಹುಡುಗರಿಗೆಲ್ಲ ಮುಖ್ಯವಾಗಿ ಅವರ ಸಮಾಜಕ್ಕನುಯುಕ್ತ ಶಿಕ್ಷಣವೇ ಅವರವರ ಹಿರಿಯರಿಂದ ದೊರೆಯುತ್ತಿದ್ದಿತು. ನಾವೆ-ಡೋಣಿಗಳನ್ನು ಸಾಗಿಸುವದು, ರಥಾಶ್ವಗಳನ್ನು ನಿಯಂತ್ರಿಸಿ ಸಾರಥ್ಯಕರ್ಮವನ್ನು ನಿರ್ವಹಿಸುವದು, ಮೀನು ಹಿಡಿಯುವದು ಇವೇ ಮುಂತಾದವು ಅಲ್ಲಿಯವರ ಪರಂಪರೆಯ ಉದ್ಯೋಗಗಳಾಗಿದ್ದವು.

ಅಧಿರಥನು ತನ್ನ ಸಾಕುಮಗ ಕರ್ಣನಿಗೆ ಇವಾವ ಬಗೆಯ ಶಿಕ್ಷಣ ಕೊಡಲು ಮನಸ್ಸು ಮಾಡಲಿಲ್ಲ. ತಾನು ಧೃತರಾಷ್ಟ್ರನ ಸನ್ನಿಧಿಯ ಸೂತ ನಾದುದರಿಂದ ಧರ್ಮ ದುರ್ಯೋಧನಾದಿ ರಾಜಮಕ್ಕಳಿಗೆ ದೊರೆಯುತ್ತಿರುವ ಶಿಕ್ಷಣದ ಮಹತ್ವವನ್ನು ಆತನು ಅರಿತಿದ್ದನು. ತನ್ನ ಈ ಸಾಕುಮಗನಿಗೂ ಆ ರಾಜಮಕ್ಕಳಿಗೆ ದೊರೆಯತಕ್ಕ ಶಿಕ್ಷಣವನ್ನೇ ಕೊಡಿಸಬೇಕೆಂಬ ಹಿರಿಯ ಹಂಬಲವು ಆತನಲ್ಲಿ ಉಂಟಾಯಿತು. ತಮ್ಮ ಮಕ್ಕಳು ಉತ್ತರೋತ್ತರ ಬುದ್ಧಿವಂತರಾಗಬೇಕು, ಜಾಣರಾಗಬೇಕು, ಶೂರವೀರರಾಗಿ ಕೀರ್ತಿವಂತ ರಾಗಬೇಕು. ಈ ಮುಂತಾದ ಭಾವನೆಗಳು ಪಾಲಕರೆಲ್ಲರಲ್ಲಿ ಸಾಮಾನ್ಯ ವಾಗಿರುವವಲ್ಲವೇ! ಹಾಗೆಯೇ ಅಧಿರಥನಲ್ಲಿ ಕರ್ಣನ ಬಗೆಗೆ ಮನೋ ವಾಂಛಿತವು ಮೂಡಿತು.

ತನ್ನ ಹಂಬಲಕ್ಕನುಸರಿಸಿ ಆತನು-'ಇನ್ನು ಈ ಮಗನನ್ನು ಯೋಗ್ಯ ತೆಯ ಗುರುವಿನ ಬಳಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ಕಳಿಸಿಬಿಡುವೆನು' ಎಂದು ನಿಶ್ಚಯಮಾಡಿಕೊಂಡನು. ಚಂಪಾಪುರದಲ್ಲಿ ಅನುಕೂಲತೆಯಿರಲಿಲ್ಲ. ಅಂಥ ಗುರುವನ್ನು ಶೋಧಮಾಡಹತ್ತಿದನು.

ಹಸ್ತಿನಾಪುರದ ಹತ್ತಿರದ ಒಂದು ಅರಣ್ಯದಲ್ಲಿ ಒಂದು ವಿಶಾಲವಾದ ಪರ್ಣಕುಟೀರವು. ಅಲ್ಲಿ ಗಂಭೀರಮುಖಮುದ್ರೆಯ ಬ್ರಾಹ್ಮಣವರ್ಯನವಾಸ. ಅವನ ಬಳಿಯಲ್ಲಿ ದುರ್ಯೋಧನಾದಿ ಕೌರವ ಬಾಲಕರೂ ಧರ್ಮನೊದಲಾದ ಪಾಂಡುಕುಮಾರರೂ ಅಲ್ಲದೆ ಅಶ್ವತ್ಥಾಮ, ದ್ರುಪದನಂದನ ಮುಂತಾದ ಇನ್ನೂ ಅದೆಷ್ಟೋ ಬಾಲಕರೂ ಇದ್ದುಕೊಂಡು ಆ ಗುರುವರ್ಯ ಬ್ರಾಹ್ಮಣ ನಿಂದ ಪಾಠಹೇಳಿಸಿಕೊಳ್ಳಹತ್ತಿದ್ದರು. ಕೆಲವೊಂದುವೇಳೆಯಲ್ಲಿ ಬಿಲ್ಲಿನ ಉಪಯೋಗ, ಇನ್ನೊಂದು ವೇಳೆಯಲ್ಲಿ ಕತ್ತಿ-ಡಾಲು ಮುಂತಾದ ಶಸ್ತ್ರ ಗಳನ್ನು ಪ್ರಯೋಗಿಸುವ ಚಾತುರ್ಯ, ಮತ್ತೊಂದುವೇಳೆಯಲ್ಲಿ ಎಲ್ಲರಿಗೂ ರಾಜನೀತಿ, ಧರ್ಮನೀತಿ ಮುಂತಾದವುಗಳ ಬೋಧೆ ಇವೆಲ್ಲವು ನಿತ್ಯವೂ ನಿಯಮಭಂಗವಾಗದೆ ಆ ಬಾಲಕರಿಗೆ ಗುರುವಿನಿಂದ ಶಿಕ್ಷಿತವಾಗುತ್ತಿದ್ದವು.

ಅಧಿರಥನು ಈ ಕುಟೀರ ವಿದ್ಯಾಲಯದ ಸಂಗತಿಯನ್ನು ಅದಾ ರಿಂದಲೋ ಅರಿತುಕೊಂಡನು. ಮರುದಿನ ಮಗನ ಸಹಿತವಾಗಿ ಆ ವಿದ್ಯಾ ಲಯಕ್ಕೆ ಬಂದನು. ಅಲ್ಲಿ ಬಾಲಕರಿಗೆಲ್ಲ ವ್ಯವಸ್ಥಿತ ರೀತಿಯಿಂದ ದೊರೆಯುವ

ಶಿಕ್ಷಣವನ್ನು ಬಹಿರಂಗ ಬಗೆಯಿಂದ ನಿರೀಕ್ಷಿಸಿದನು. ವಿದ್ಯಾಲಯದ ದ್ವಾರ ದಲ್ಲಿದ್ದ ಸೇವಕನನ್ನು ಕುರಿತು–'ಇಲ್ಲಿಯ ಗುರುಗಳಾರು?' ಎಂದು ಕೇಳಿದನು. ಆದಕ್ಕವನು–'ಗಂಗಾದ್ವಾರದಲ್ಲಿರುತ್ತಿದ್ದ ಭರದ್ವಾಜ ಋಷಿಯ ಪ್ರಖ್ಯಾತ ಪುತ್ರ ದ್ರೋಣಾಚಾರ್ಯರೇ ಈ ವಿದ್ಯಾಲಯದ ಪರಮಗುರು' ಎಂದು ಹೇಳಿ ದನು. ಕೂಡಲೆ ಅಧಿರಥನು–'ಅವರು ನನ್ನ ಪರಿಚಿತರು. ಅವರನ್ನು ಕಾಣಬೇಕಾಗಿದೆ. ನನ್ನನ್ನು ಅವರ ಕಡೆಗೆಕರೆದೊಯ್ಯು' ಎಂದು ತಿಳಿಸಲು ಅವನು ಬಿಡುವಿನ ವೇಳೆಯಲ್ಲಿ ಅಧಿರಥನನ್ನು ಅವನ ಮಗನ ಸಹಿತವಾಗಿ ಕರೆದೊಯ್ದು ಗುರುಗಳಿಗೆ ಭೆಟ್ಟಿಮಾಡಿಸಿದನು.

ದ್ರೋಣಾಚಾರ್ಯರನ್ನು ಕಂಡಕೂಡಲೆ ಅಧಿರಥನು ಅವರಿಗೆ ಸಾಷ್ಟಾಂಗವಾಗಿ ವಂದಿಸಿದನು ಮತ್ತು ತಮ್ಮ ಮಗನನ್ನೂ ಅವರ ಪಾದ ಗಳಮೇಲೆ ಕೆಡವಿ–'ಸ್ವಾಮಿ! ಈ ಬಾಲಕನು ನನ್ನ ಸಾಕುಮಗನು. ಇವ ನನ್ನು ನಾನು ಗಂಗಾಮಾತೆಯಿಂದ ಸ್ವೀಕರಿಸಿದೆನು. ನನ್ನ ಸಂಪತ್ತಿಗೆಲ್ಲ ಈತನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡಿರುವೆ. ಪಿತೃಕರ್ತವ್ಯ ವೆಂದು ಈ ಬಾಲಕನಿಗೆ ನಾನು ತಮ್ಮ ಬಳಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ಕರೆ ತಂದಿರುವೆನು. ತಾವು ಈತನನ್ನು ಮಗನೆಂದು ಭಾವಿಸಿ ಉಚಿತವಾದ ಶಿಕ್ಷಣ ಕೊಡುವಿರೆಂದು ನಂಬಿರುವೆ' ಎಂದನು.

ದ್ರೋಣಾಚಾರ್ಯರು ಆ ಹುಡುಗನ ಅರ್ಥಾತ್ ಕರ್ಣನ ರೂಪ-ಲಕ್ಷಣ ಸಂಪನ್ನತೆಯನ್ನೂ ಅವನಲ್ಲಿಯ ಸ್ವಾಭಾವಿಕ ಕವಚಕುಂಡಲಗಳನ್ನೂ ನಿರೀ ಕ್ಷಿಸಿ ಮನಸ್ಸಿನಲ್ಲಿ "ಇವನೊಬ್ಬ ಅಸಾಧಾರಣ ಬಾಲಕನಾಗಿರುವನು. ಇವನಿಗೆ ಯೋಗ್ಯ ಶಿಕ್ಷಣ ದೊರೆತರೆ ಮುಂದೆ ಇವನು ಒಬ್ಬ ಶೂರಮಹಾಪುರುಷ ನಾಗುವನು." ಎಂದು ತಿಳಿದುಕೊಂಡರು. ಅವರು ಆ ಕರ್ಣನನ್ನು ತಮ್ಮ ಗುರುಕುಲದಲ್ಲಿಯೇ ಇರಿಸಿಕೊಂಡು ಆ ಅಧಿರಥನಿಗೆ 'ಒಳ್ಳೇದು' ಎಂದು ಹೇಳಿ ಆತನಿಗೆ ಮನೆಗೆ ಹೋಗಲು ಅಪ್ಪಣೆ ನೀಡಿ ಕಳಿಸಿದರು.

ಇಂತು ಕರ್ಣನು ದ್ರೋಣಾಚಾರ್ಯರ ಕುಟೀರ ಗುರುಕುಲವನ್ನು ಪ್ರವೇಶ ಮಾಡಿದನು. ಆ ಗುರುಕುಲದಲ್ಲಿ ದುರ್ಯೋಧನ ಮೊದಲಾದವರ ಜೊತೆಗೆ ಸೇರಿ ಇವನ ವಿದ್ಯಾಭ್ಯಾಸವು ಸುರುವಾಯಿತು. ಇರಇರುತ್ತ ಆತನಿಗೆ ಎಲ್ಲ ಸಹಾಧ್ಯಾಯಿಗಳ ಪರಿಚಯವಾಯಿತು. ಮೊದಮೊದಲು ದುರ್ಯೋಧ

ನನು ಆತನನ್ನು ಹೊಸ ಗೆಳೆಯನೆಂದಿಷ್ಟೇ ಆದರಿಸುತ್ತಿದ್ದನು. ಮುಂದೆ ಆತನ ಗುಣಗಳು ಆ ದುರ್ಯೋಧನನಿಗೆ ಕಂಡು ಬಂದುದರಿಂದ ಕರ್ಣನನ್ನು ಕೇವಲ ಮಿತ್ರನೆಂದು ಭಾವಿಸಹತ್ತಿದನು. ಇನ್ನೊಂದು ಮಹತ್ವದ ಪ್ರಸಂಗವೊದಗಿ ಅದರಿಂದಂತೂ ಕರ್ಣನು ದುರ್ಯೋಧನನಿಗೆ ತನ್ನ ಜನ್ಮಾಂತ್ಯದ ವರೆಗೂ ಜೀವನ್ಮಿತ್ರನಾದನು. ಆ ಪ್ರಸಂಗವಿಂತಿದೆ:—

ದ್ರೋಣಾಚಾರ್ಯರ ಗುರುಕುಲಕ್ಕೆ ಸೇರಿದವರೆಲ್ಲರು ಶಸ್ತ್ರಾಸ್ತ್ರ ವಿದ್ಯೆಗಳಲ್ಲೆಲ್ಲ ನೈಪುಣ್ಯ ಪಡೆದರು. ತಮ್ಮ ಅಧ್ಯಾಪನ ಕ್ರಿಯೆಯು ಸಫಲವಾದುದಕ್ಕೆ ದ್ರೋಣಾಚಾರ್ಯರಿಗೆ ಬಲು ಸಂತೋಷ! ಅವರು ತಮ್ಮ ವಿದ್ಯಾರ್ಥಿಗಳ ಕುಶಲತೆಯನ್ನು ಜನತೆಗೆ ಪ್ರದರ್ಶಿಸುವ ಬಯಕೆಯುಳ್ಳವರಾದರು. ಅದರಂತೆ ಹಸ್ತಿನಾಪುರದ ಬಳಿಯಲ್ಲಿ ಒಂದು ಆಟದ ಬೈಲನ್ನು ಸಿದ್ಧಪಡಿಸಿ ಅಲ್ಲಿಗೆ ತಮ್ಮ ವಿದ್ಯಾರ್ಥಿಗಳನ್ನೆಲ್ಲ ಕರೆದೊಯ್ದರು. ಧೃತರಾಷ್ಟ್ರಾದಿ ಪ್ರೇಕ್ಷಕರು ಆ ಬೈಲಿನಲ್ಲಿ ಬಂದು ಕುಳಿತರು. ಎಲ್ಲ ವಿದ್ಯಾರ್ಥಿಗಳು ತಾವು ಗುರುಗಳಿಂದ ಸಂಪಾದಿಸಿದ ವಿದ್ಯೆಯನ್ನು ಜನತೆಯ ಮುಂದೆ ತೋರಿಸಿದರು. ಅರ್ಜುನನ ಕೌಶಲ್ಯಕ್ಕೆ ಎಲ್ಲರೂ ವಾಹವಾ! ಎಂದು ಆತನನ್ನು ಹೊಗಳಿದರು. ಎಲ್ಲ ವಿದ್ಯಾರ್ಥಿಗಳಲ್ಲಿ ಅರ್ಜುನನ ಮೇಲೆಯೇ ದ್ರೋಣಾಚಾರ್ಯರ ಪ್ರೀತಿ ಹೆಚ್ಚಾಗಿದ್ದಿತು. ಇಂದು ಅರ್ಜುನನು ಪಡೆದ ಯಶಸ್ಸಿಗೆ ಅವರು ತಮಗೆ ಧನ್ಯತೆಯನ್ನೆಣಿಸಿಕೊಂಡರು!

ನಿಜವಾದ ಶೂರನು ಇನ್ನೊಬ್ಬನ ಶೂರತನವನ್ನು ಮನ್ನಿಸುವದಿಲ್ಲ. ಕರ್ಣನು ಅಂಥವರಲ್ಲಿ ಒಬ್ಬನು. ಅರ್ಜುನನನ್ನು ಜನತೆಯು ಹೊಗಳಿದುದನ್ನು ಸಹಿಸದೆ ಆತನು ರಂಗ ಸ್ಥಲಕ್ಕೆ ಬಂದನು. ಅರ್ಜುನನು ತೋರಿಸಿದ ಕೌಶಲ್ಯಗಳೆಲ್ಲವನ್ನೂ ತಾನು ಪ್ರಯೋಗಿಸಿ ತೋರಿಸಿದನು. ಆಗ ಅರ್ಜುನನನ್ನು ದ್ವೇಷಿಸುವ ದುರ್ಯೋಧನ ಮೊದಲಾದವರು ಕರ್ಣನನ್ನು ತಮ್ಮ ಮೆಚ್ಚುಗೆಯ ನುಡಿಗಳಿಂದ ಗೌರವಿಸಿದರು. ಕರ್ಣನು ಪ್ರತಿಯಾಗಿ ಅವರನ್ನು ವಂದಿಸಿ ತನ್ನ ಆಭಾರ ಬೀರಿದನು.

ಈಗ ಅರ್ಜುನ ಮತ್ತು ದ್ರೋಣಾಚಾರ್ಯರಿಗೆ ಈ ಪ್ರಸಂಗವು ಅಸಹ್ಯವೆನ್ನಿಸಿತು! ಕೌರವರು ಅರ್ಜುನನನ್ನು ಕರ್ಣನಿಂದ ಹೀಗಳೆದು ಮಾತಾಡಹತ್ತಿದರು. ಭೀಮ ಮೊದಲಾದ ಪಾಂಡವರು ಪ್ರತಿಯಾಗಿ ಅವರನ್ನು ತಿರಸ್ಕ

ರಿಸ ಹತ್ತಿದರು. ಅವರಿವರಲ್ಲಿ ಮಾತಿಗೆ ಮಾತು ಬೆಳೆದವು. ಕರ್ಣನು ತನ್ನನ್ನು ಗೌರವಿಸಿದ ಕೌರವರನ್ನು ಬೆಂಬಳಿಸಿಕೊಂಡು ಮುಂದೆ ಬಂದು ಅರ್ಜುನನೊಡನೆ ದ್ವಂದ್ವ ಯುದ್ಧ ಸಾರಿದನು.

ಇಂತು ಪ್ರಯೋಗ ಪ್ರದರ್ಶನವೆಂದು ದ್ರೋಣಾಚಾರ್ಯರು ಹೂಡಿದ ಸಮಾರಂಭವು ಕೌರವ-ಪಾಂಡವರ ದ್ವೇಷಾಗ್ನಿಯನ್ನು ಮತ್ತಿಷ್ಟು, ಇನ್ನಿಷ್ಟು ಹೆಚ್ಚಿಸುವದರಲ್ಲಿ ಪರಿವರ್ತಿಸಿತೆಂದು ಹೇಳಬಹುದು. ಇದರಿಂದಲೇ ಕರ್ಣನು ದುರ್ಯೋಧನನ ಜೀವನ್ಮಿತ್ರನೆನಿಸಿದನು.

ಶತ್ರುವಿನ ಆಹ್ವಾನವನ್ನು ಸ್ವೀಕರಿಸುವದು ಕ್ಷತ್ರಿಯನ ಧರ್ಮ. ವೈರಿಯನ್ನು ಬೆನ್ನಿಗಿರಿಸಿಕೊಂಡು ಆಹ್ವಾನಿಸಿದ ಕರ್ಣನ ಕೂಡ ಅರ್ಜುನನು ಆಗಲೇ ಯುದ್ಧಕ್ಕೆ ಸಿದ್ಧನಾದನು. ಭೀಷ್ಮ-ದ್ರೋಣ-ಕೃಪಾದಿಗಳು ಅರ್ಜುನನ ಪಕ್ಷವನ್ನೂ, ಕೌರವರು, ಶಲ್ಯ, ಶಕುನಿ ಮೊದಲಾದವರು ಕರ್ಣನ ಪಕ್ಷವನ್ನೂ ಕಟ್ಟಿಕೊಂಡು ಅದೇ ಬೈಲಿನಲ್ಲಿ ಕುಳಿತರು. ಯುದ್ಧದಾರಂಭದಲ್ಲಿ ಅರ್ಜುನನ ಪರವಾಗಿ ಕೃಪಾಚಾರ್ಯನು ಪದ್ಧತಿಯಂತೆ ಆತನ ರಾಜ ವಂಶವನ್ನುಚ್ಚರಿಸಿದನು. ಮತ್ತು ಕರ್ಣನಿಗೆ- 'ಕರ್ಣಾ! ಅರ್ಜುನನೊಡನೆ ಯುದ್ಧ ಮಾಡುವ ನೀನು ನಿನ್ನ ವಂಶವನ್ನು ಉಚ್ಚರಿಸು' ಎಂದು ಎಚ್ಚರಿಸಿದನು.

ಕೃಪಾಚಾರ್ಯನ ಮಾತಿನಿಂದ ಕರ್ಣನು ಒಮ್ಮೆಲೇ ಖಿನ್ನನಾಗಿ ತಲೆ ತಗ್ಗಿಸಿ ನಿಂತು ಏನೇನೋ ವಿಚಾರ ಮಾಡಹತ್ತಿದನು. ಇದು ವರೆಗೆ ಅವನಲ್ಲಿ ಉಕ್ಕುತ್ತಿದ್ದ ಅರ್ಜುನನೊಡನೆ ಯುದ್ಧ ಮಾಡುವ ಔತ್ಸುಕ್ಯವು ಅದೆತ್ತಲೋ ಹೋಗಿ ಬಿಟ್ಟಿತು. ಕೌರವರೆಲ್ಲರು ನಿರುತ್ಸಾಹನಾದ ಕರ್ಣನನ್ನು ಕಂಡು ದಂಗು ಬಡೆದರು. ಅಷ್ಟರಲ್ಲಿ ದುರ್ಯೋಧನನು ಮುಂದೆ ಬಂದು ಕೃಪಾಚಾರ್ಯನಿಗೆ:— 'ಆಚಾರ್ಯರೇ! ನಿಮ್ಮ ಮಾತಿನ ಹೊಲಬು ಗೊತ್ತಾಯಿತು. ಈ ಕರ್ಣನು ರಾಜನಲ್ಲದಿದ್ದರೂ ಮೇಲ್ತರದ ಶೂರನಾಗಿರುವನು. ಸೇನಾಧಿಪತ್ಯದ ಲಕ್ಷಣಗಳೆಲ್ಲವೂ ಇವನಲ್ಲಿವೆ. ಇವನೊಡನೆ ಅರ್ಜುನನು ಯುದ್ಧ ಮಾಡುವದಕ್ಕೆ ನಿಮ್ಮ ತಾರ-ತಮ್ಯ ಭಾವವು ಅಡ್ಡಿಯಾಯಿತಲ್ಲವೇ? ಕರ್ಣನು ರಾಜವಂಶ ಜನಿತನಾಗದಿದ್ದವನೆಂದು ನಿಮ್ಮ ಆಕ್ಷೇಪವಲ್ಲವೇ? ಅದರ ನಿರಸನಕ್ಕಾಗಿ ನಾನು ಇದೀಗಲೇ ನಮ್ಮ ಕರ್ಣನನ್ನು ಅಂಗದೇಶಕ್ಕೆ ಅರಸನನ್ನಾಗಿ ಮಾಡಿ ಪಟ್ಟಗಟ್ಟುವೆ' ಎಂದು ನುಡಿದು ಆಗಲೇ ಅದೇ ಸ್ಥಳದಲ್ಲಿಯೇ

ಕರ್ಣನನ್ನು ಅಂಗದೇಶದ ರಾಜನೆಂದು ಸಾರಿದನು. ಮತ್ತು ರಾಜರಿಗುಚಿತ ವಾದ ವಸ್ತ್ರಾಭರಣಗಳಿಂದ ಸನ್ಮಾನಿಸಿದನು. ಕೌರವ ಬಣವೆಲ್ಲವೂ 'ಅಂಗ ರಾಜ ಕರ್ಣ ರಾಜನಿಗೆ ಜಯವಾಗಲಿ' ಎಂದು ಜಯಘೋಷ ಮಾಡಿತು.

ಇಂತು ಕರ್ಣನು ಕನಸು ಮನಸಿಲ್ಲದೆ ಅಂಗರಾಜನಾದನು.

ಈ ರೀತಿ ಪ್ರದರ್ಶನವೆಂದು ಸಾರಿದ ಪ್ರಸಂಗವು ಕರ್ಣನು ಅಂಗರಾಜ ನಾಗುವ ವರೆಗೆ ಅನೇಕ ಘಟನೆಗಳಿಂದ ಕೂಡಿಕೊಂಡು ಅಂದು ಮುಕ್ತಾಯ ಗೊಂಡಿತು.

## ಬ್ರಹ್ಮಾಸ್ತ್ರ ಪಡೆದ ಕರ್ಣ

ಹಿಂದೆ ಹೇಳಿದಂತೆ ಕರ್ಣನು ದುರ್ಯೋಧನನ ಪರಮ ಸ್ನೇಹಿತನಾಗಿ ಅವನೊಡನೆ ಸದಾವಕಾಲವೂ ವಾಸಿಸಹತ್ತಿದನು. ದುರ್ಯೋಧನನಿಗೆ ಬೇಕಾದಂಥ ಶೂರನೂ ಬುದ್ಧಿಶಾಲಿಯೂ ಈಗ ದೊರೆತಂತಾಗಿ ಅವನು ಸತತವೂ ಆನಂದದಲ್ಲಿ ಇರಹತ್ತಿದನು. ಅರ್ಜುನನನ್ನು ಶೂರತನದ ಕೆಳ ಮಟ್ಟನಲ್ಲಿ ಎಳೆಯುವ ವಿಚಾರವು ಅವರಿಬ್ಬರದಾಗಿದ್ದಿತು. ಅದಕ್ಕಾಗಿಯೇ ಅವರು ಶಸ್ತ್ರಾಸ್ತ್ರ ಪ್ರಯೋಗಗಳಲ್ಲಿ ಹೊಸ ಹೊಸಬಗೆಗಳನ್ನು ಅರಿತುಕೊಳ್ಳ ಹತ್ತಿದರು. ಒಂದು ದಿನ ಕರ್ಣನು ಶಸ್ತ್ರಾಸ್ತ್ರದ ಅಭ್ಯಾಸ ನಡೆಯಿಸಿರುವಾಗ ಒಮ್ಮೆಲೆ ಅವನಲ್ಲಿ ಅರ್ಜುನನು ಪ್ರಯೋಗಿಸುತ್ತಿರುವ ಬ್ರಹ್ಮಾಸ್ತ್ರದ ಬಗೆಗೆ ವಿಚಾರ ಹೊರಟಿತು. ತಾನು ಬ್ರಹ್ಮಾಸ್ತ್ರವನ್ನು ದೊರಕಿಸಿಕೊಂಡು ಅದರ ಪ್ರಯೋಗ ಉಪಸಂಹಾರಗಳನ್ನು ಅರಿತುಕೊಳ್ಳುವ ನಿರ್ಧಾರ ಮಾಡಿ ದನು. ಅದರಂತೆ ಅವನು ಮರುದಿನ ಗುರು ದ್ರೋಣಾಚಾರ್ಯರ ಬಳಿಗೆ ಹೋಗಿ ವಂದಿಸಿ— 'ಗುರುಗಳೇ! ನನಗೂ ಅರ್ಜುನನಂತೆ ಬ್ರಹ್ಮಾಸ್ತ್ರದ ಪ್ರಯೋಗ ಉಪಸಂಹಾರಗಳನ್ನು ಬೋಧಿಸುವದಾಗಬೇಕು' ಎಂದು ಬೇಡಿ ಕೊಂಡನು. 'ಇದುವರೆಗೆ ಬ್ರಹ್ಮಾಸ್ತ್ರನ ಹೊರತು ಎಲ್ಲವಿದ್ಯೆಗಳನ್ನು ನಿಮ್ಮಿಂದ ಕಲಿತಿರುವೆ; ಇನ್ನು ಕೇವಲ ಪುತ್ರ ಪ್ರೇಮವೆಂದು ಭಾವಿಸಿ ನನಗೆ ಉಪದೇಶ ಮಾಡಬೇಕು' ಎಂದನು. ಆಗ ದ್ರೋಣಾಚಾರ್ಯರು ಕರ್ಣನ ಹೇಳಿಕೆ ಬೇಡಿಕೆ ಗಳನ್ನು ಕೇಳಿಕೊಂಡು ವಿಚಾರ ಗೊಂದಲದಲ್ಲಿ ಬಿದ್ದರು. ಇವನಿಗೆ ಬ್ರಹ್ಮಾಸ್ತ್ರ ರಹಸ್ಯವನ್ನು ಹೇಳಿಕೊಟ್ಟರೆ ಈತನು ಅರ್ಜುನನಿಗಿಂತಲೂ ಮಿಗಿಲಾದ ಯಶ ಗಳಿಸುವನು. ಇದೊಂದು ನನಗೆ ಅಸಹ್ಯವಾತಾಗುವದು. ಇನ್ನು ಎರಡನೆಯ

ಎಲ್ಲವೂ ದೂಷಿತ. ಪರಶುರಾಮನು ಸಂತ್ರಸ್ತನಾಗಿ:—'ಶಿವಶಿವ! ನಾನು ಅಪವಿತ್ರನಾದೆ. ನನ್ನ ವ್ರತಭಂಗವಾಯಿತು. ಕರ್ಣಾ ನೀನು ಹೀಗೇಕೆ ವರ್ತಿಸಿದಿ. ನಿಜಸ್ಥಿತಿಯನ್ನೆಲ್ಲ ತಿಳಿಸು, ಅಂಜಬೇಡ' ಎಂದನು.

ಪರಶುರಾಮನಾಡಿದ ನುಡಿಯಿಂದ ಕರ್ಣನು ಕಕ್ಕಾವಿಕ್ಕಿಗೊಂಡನು. ಕೂಡಲೆ ಅವನು ಹುಳ ಬಂದು ತನ್ನ ತೊಡೆಯನ್ನು ಕೊರೆಯಹತ್ತಿದ್ದರಿಂದಾರಂಭಿಸಿ ಎಲ್ಲ ಸಂಗತಿಯನ್ನು ಹೇಳಿದನು. ಆಗ ಪರಶುರಾಮನು-'ಮೂರ್ಖಾ ನೀನು ಯಾವನಿರುವಿ? ನಿಜಸಂಗತಿಯನ್ನು ತಿಳಿಸು. ಇಂಥ ಭಯಂಕರ ವ್ಯಥೆಯನ್ನು ಸಹಿಸುವ ಶಕ್ತಿಯು ಕ್ಷತ್ರಿಯನ ಹೊರತು ಆದಾವ ಬ್ರಾಹ್ಮಣನಲ್ಲಿಯೂ ಬರಲಾರದು. ನಿಜಸಂಗತಿಯನ್ನು ಹೇಳು' ಎಂದು ಗದ್ದರಿಸಿದನು. ಆಗ ಕರ್ಣನು—'ಗುರುಗಳೇ ಕೃಪೆಮಾಡಿರಿ. ನಾನು ಬ್ರಾಹ್ಮಣ-ಕ್ಷತ್ರಿಯ ವರ್ಗಗಳ ಮಿಶ್ರಿತ ಜಾತನು. ನಾನು ಸಾರಥಿಯೂ ಅಹುದು, ಸೂತನೂ ಅಹುದು. ನನ್ನನ್ನು 'ರಾಧೇಯ, ಕರ್ಣ'ನೆಂದು ಕರೆಯುವರು. ಕೇವಲ ಬ್ರಹ್ಮಾಸ್ತ್ರ ಪ್ರಾಪ್ತಿಗಾಗಿ ತಮ್ಮೆದುರು ಸುಳ್ಳಾಡಿದೆನು. ಕ್ಷಮಿಸಿರಿ' ಎಂದು ಅನನ್ಯ ಭಾವದಿಂದ ಬೇಡಿಕೊಂಡನು. ಪರಶುರಾಮನು ಸಂತಾಪಗೊಂಡು ತನ್ನೆದುರು ಹುದುಗಿ ನಿಂತಿದ್ದ ಕರ್ಣನಿಗೆ:—'ನಿನ್ನ ಈ ಅಸತ್ಯವರ್ತನೆಯ ಫಲವಾಗಿ ನೀನು ನನ್ನಿಂದ ಪಡೆದ ಬ್ರಹ್ಮಾಸ್ತ್ರವು ನಿನ್ನ ಪ್ರಸಂಗಕ್ಕೆ ಸಹಾಯವಾಗದಿರಲಿ' ಎಂದು ಶಾಪನೀಡಿದನು. ಮತ್ತು ಆತನಿಗೆ-'ಕರ್ಣಾ! ನೀನು ಇಲ್ಲಿಂದ ಹೋಗು, ನಡೆ, ಈ ನನ್ನ ಸ್ಥಾನದಲ್ಲಿ ಅಸತ್ಯವಾದಿಗಳಿಗೆಂದೂ ಆಶ್ರಯವಿಲ್ಲ' ಎಂದು ನುಡಿದನಲ್ಲದೆ 'ಕರ್ಣಾ! ನಿನ್ನಂತಹ ಶೂರ ಕ್ಷತ್ರಿಯನೊಬ್ಬನೂ ಇನ್ನು ಈ ಜಗತ್ತಿನಲ್ಲಿ ಉದಿಸಲಾರನು' ಎಂದು ಹೇಳಿದನು.

ಬಳಿಕ ಕರ್ಣನು ಅಲ್ಲಿಂದ ಹೊರಟು ದುರ್ಯೋಧನನ ಬಳಿಗೆ ಬಂದನು. ಹಾಗು 'ನಾನು ಪರಶುರಾಮನಿಂದ 'ಬ್ರಹ್ಮಾಸ್ತ್ರ' ಪಡೆದು ಬಂದೆನು' ಎಂದು ತಿಳಿಸಿದನು. ದುರ್ಯೋಧನನು:-'ಕರ್ಣಾ! ನಿನ್ನ ಜೀವಮಾನದಲ್ಲಿ ಇದೊಂದು ಮಹತ್ವದ ಪ್ರಸಂಗವನ್ನು ಮುಕ್ತಾಯಗೊಳಿಸಿದಿ' ಎಂದು ಆತನನ್ನು ಗೌರವಿಸಿದನು.

## ಚಿತ್ರಾಂಗದೆಯ ಸ್ವಯಂವರದಲ್ಲಿ

ಕರ್ಣನು ಬ್ರಹ್ಮಾಸ್ತ್ರವನ್ನು ದೊರಕಿಸಿಕೊಂಡು ಬಂದ ನಂತರ ದುರ್ಯೋಧನನು 'ಇನ್ನು ಕರ್ಣನಿಂದ ಅರ್ಜುನನು ನಿಶ್ಚಯವಾಗಿಯೂ ಪರಾಜಿತನಾಗುವನು' ಎಂಬ ನಿಶ್ಚಿತ ಗ್ರಹಿಕೆಯುಳ್ಳವನಾದನು. ಕರ್ಣನಮೇಲೆ ನಿಸ್ಸೀಮ ಪ್ರೇಮವನ್ನು ತಾಳಿದನು. ಮತ್ತು ಕರ್ಣನೇ ತನಗೆ ಸರ್ವಾಧಾರನೆಂದು ಆಡಿ ತೋರಿಸಹತ್ತಿದನು. 'ಇನ್ನು ನನಗೆ ಬೇರೆಯವರ ಸಹಾಯದ ಅವಶ್ಯಕತೆಯಿಲ್ಲ. ನಾವಿಬ್ಬರೇ ಬೇಕಾದಂಥ ವೈರಿಯನ್ನು ಹೇಳಹೆಸರಿಲ್ಲದಂತೆ ಹಾರಿಸಿ ಬಿಡುವೆವು' ಎಂಬ ದೃಢವಿಶ್ವಾಸವುಳ್ಳವನಾದನು

ಕರ್ಣನು ಬ್ರಹ್ಮಾಸ್ತ್ರ ಪಡೆದುಕೊಂಡು ಬಂದನಂತರ-ಕಲಿಂಗ ದೇಶದ ಅರಸು ಚಿತ್ರಾಂಗದನು ತನ್ನ ಮಗಳ ಸ್ವಯಂವರ ಸಮಾರಂಭವನ್ನು ಹೂಡಿದನು ಭರತಖಂಡದಲ್ಲಿಯ ಎಲ್ಲ ತರುಣರಾಜಪುತ್ರರನ್ನು ಸಮಾರಂಭಕ್ಕಾಗಿ ಆಮಂತ್ರಿಸಿದ್ದನು. ರಾಜಪುತ್ರಿಯನ್ನು ಬಯಸಿ ಅದೆಷ್ಟೋ ರಾಜರುಗಳು ತಮ್ಮ ತಮ್ಮ ರಾಜವೈಭವದಿಂದ ಅಲಂಕೃತರಾಗಿ ಬಂದಿದ್ದರು. ಶಿಶುಪಾಲ, ಜರಾಸಂಧ, ಭೀಷ್ಮಕ, ಸ್ತ್ರೀರಾಜ್ಯಾಧಿಪ ಶೃಗಾಲ, ಅಶೋಕ, ಶತಧನ್ವ, ಭೋಜವೀರ ಮುಂತಾದ ದಿಗ್ದೇಶಗಳಮೇಲಿನ ಅರಸು ಮಕ್ಕಳನ್ನು ಆ ಸಮಾರಂಭದಲ್ಲಿ ಕಾಣಬಹುದಾಗಿದ್ದಿತು. ಕೌರವರಾಜಪುತ್ರ ದುರ್ಯೋಧನನೂ ಕರ್ಣನೊಡನೆ ಹೋದನು. ಎಲ್ಲರೂ ತಮ್ಮತಮ್ಮ ನಿಯೋಜಿತ ಆಸನಗಳಲ್ಲಿ ವಿರಾಜಮಾನರಾಗಿದ್ದರು. ಆ ಸಮಯದಲ್ಲಿ ಚಿತ್ರಾಂಗದ ಕನ್ಯೆಯು ಕೈಯಲ್ಲಿ ಪುಷ್ಪಹಾರವನ್ನು ಹಿಡಿದುಕೊಂಡು ರಾಜರೆಲ್ಲರು ಕುಳಿತ ಸಾಲಿನ ಮುಂದೆ ಬಂದಳು. ತನ್ನ ದಾಸಿಯಿಂದ ಪ್ರತಿಯೊಬ್ಬ ರಾಜನ ಬಗೆಗೆ ಇರುವ ಸಂಕ್ಷಿಪ್ತ ಚರಿತ್ರೆಯನ್ನು ಕೇಳಿಕೊಳ್ಳುತ್ತ, ಆ ಆ ರಾಜರನ್ನು ನಿರೀಕ್ಷಿಸುತ್ತ ಮುಂದೆ ಮುಂದೆ ಸಾಲಿನಲ್ಲಿ ಸಾಗಹತ್ತಿದಳು. ಅರ್ಥಾತ್ ಆಕೆ ಮುಂದೆ ಸಾಗಿದಂತೆ ಹಿಂದಿನ ರಾಜರೆಲ್ಲ ಆವಳ ಮನಸ್ಸಿಗೆ ಬರಲಿಲ್ಲವೆಂದಂತಾಯಿತು. ಕಡೆಗೆ ಆಕೆ ದುರ್ಯೋಧನ ರಾಜನನ್ನೂ ಸಹ ದಾಟಿ ಮುಂದೆ ನಡೆದಳು.

ರಾಜಪುತ್ರಿಯು ತನ್ನನ್ನು ವರಿಸದೆ ತಿರಸ್ಕರಿಸಿ ಮುಂದೆ ಹೋದಳೆಂದು ದುರ್ಯೋಧನನಿಗೆ ಅತೀವ ಸಂತಾಪ-ಕ್ರೋಧಗಳು ಉತ್ಪನ್ನವಾದವು. ಕೂಡಲೆ ಅವನು ಕರ್ಣನನ್ನು ಸೂಚನೆಯಿಂದ ಎಚ್ಚರಿಸಿ ನೆರೆದ ರಾಜರುಗಳೆಲ್ಲ ನೋಡು

ತ್ತಿರಲು ಆ ರಾಜಕನ್ಯೆಯನ್ನು ಎತ್ತಿತಂದು ತನ್ನ ಸುವರ್ಣರಥದಲ್ಲಿ ಕುಳ್ಳಿರಿಸಿ ಕೊಂಡನು. ಕರ್ಣನ ಸಾರಥ್ಯವೆಂದ ಮೇಲೆ ಕೇಳುವದೇನು? ಕೂಡಲೆ ರಥವು ಹಸ್ತಿನಾಪುರದ ಮಾರ್ಗಾವಲಂಬಿಯಾಯಿತು. ಚಿತ್ರಾಂಗದನೂ, ರಾಜಪುತ್ರಿಯನ್ನು ಕಾಮಿಸಿ ಬಂದ ರಾಜಕುಮಾರರೂ ತಮ್ಮ ತಮ್ಮ ಸೈನ್ಯ ದಳಗಳೊಂದಿಗೆ ದುರ್ಯೋಧನನ ರಥವನ್ನು ತಡೆದು ಲಗ್ಗೆಹತ್ತಿದರು. ಕರ್ಣನು ತನ್ನ ಬಾಣಗಳಿಂದ ಅವರೆಲ್ಲರನ್ನು ಸದೆಯಹತ್ತಿದನು. ಪ್ರತಿ ಪಕ್ಷಗಳಿಂದ ಬಿಡಲ್ಪಟ್ಟ ಬಾಣಗಳನ್ನೆಲ್ಲ ತುಂಡರಿಸಿದನು. ಮತ್ತೆ ಮತ್ತೆ ಬಾಣಗಳನ್ನು ಸುರಿಸಿ ಲಗ್ಗೆಹತ್ತಿದವರನ್ನೆಲ್ಲ ಹಣ್ಣುಹಣ್ಣು ಮಾಡಿ ವೈರಿಗಳು ಪೂರ್ಣ ಪರಾಜಿತರಾಗಿ ಹಿಂತೆರಳಿದ ನಂತರ ರಥವನ್ನು ಮುಂದೆ ಸಾಗಿಸಿದನು. ದುರ್ಯೋಧನ - ಚಿತ್ರಾಂಗದೆಯರನ್ನು ಸಹಿತವಾಗಿ ಹಸ್ತಿನಾಪುರಕ್ಕೆ ಬಂದು ತಲುಪಿದನು. ಅಂದು ಕರ್ಣನ ಅಲೌಕಿಕ ಶೂರತನ ಕಂಡು ದುರ್ಯೋಧನನು ಬಹಳೇ ಆನಂದಪಟ್ಟನು. ಅಂದಿನಿಂದಲೇ ಅಂಗರಾಜನು ಸ್ನೇಹಿಯೆಂಬ ದೃಢ ಭಾವನೆಯನ್ನು ತಾಳಿದನು.

## ಜರಾಸಂಧನೊಡನೆ ಯುದ್ಧ

ಮಗಧ ದೇಶವನ್ನು ಜರಾಸಂಧನೆಂಬವನು ಆಳುತ್ತಿದ್ದನು. ಅವನು ಬಲುಶೂರನು. ಚಿತ್ರಾಂಗದನ ಸೈನ್ಯವನ್ನು ಪರಾಭವಗೊಳಿಸಿದ ಕರ್ಣನ ಶೂರತನದ ಖ್ಯಾತಿಯನ್ನು ಕೇಳಿ ಅವನೊಡನೆ ಕಾದುವ ಹವ್ಯಾಸ ತಾಳಿದನು. ಅದರಂತೆ ಕರ್ಣನಿಗೆ ಯುದ್ಧದ ನಿರೋಪ ಕಳಿಸಿದನು. ಇಬ್ಬರೂ ಶೂರರು ಸಮಬಲದಿಂದ ಕಾದಿದರು. ಜರಾಸಂಧನ ದೇಹವು ದೇಹಾರ್ಧದ ಎರಡು ಹೋಳುಗಳಿಂದ ಸಂಧಿಸಿದ್ದಾಗಿತ್ತು. ಕರ್ಣನು ತನ್ನ ಜಾಣತನದಿಂದ ಆತನ ಶರೀರ ಸಂಹಿತೆಯ ಕಳವನ್ನು ಹಿಡಿದು ಬಾಣಪ್ರಯೋಗ ಮಾಡಿದನು. ಅದರಿಂದ ಜರಾಸಂಧನು ಹತವೀರ್ಯನಾದನು, ಕೂಡಲೇ ಕರ್ಣನೊಡನೆ ಒಡಂಬಡಿಕೆಯನ್ನು ಮಾಡಿಕೊಂಡನು. ಈ ಒಪ್ಪಂದದಿಂದ ಕರ್ಣನಿಗೆ ಜರಾಸಂಧನು "ಮಾಲಿನಿ" ಎಂಬ ಹೆಸರಿನ ನಗರವನ್ನು ಕೊಟ್ಟುಬಿಟ್ಟನು. ಕರ್ಣನಿಗೆ ದುರ್ಯೋಧನನಿಂದ ಅಂಗರಾಜ್ಯವು ದೊರೆತು ಅದರ ಚಂಪಾನಗರವು ಆ ದೇಶದ ರಾಜಧಾನಿಯಾಗಿತ್ತು. ಈಗ ಜರಾಸಂಧನಿಂದ ದೊರೆತ ಮಾಲಿನೀ ನಗರವೂ ಕೂಡ ಅಂಗರಾಜನ ೨ನೇ ರಾಜಧಾನಿಯಾಯಿತು.

## ಪಾಂಡವರ ನಾಶಕ್ಕಾಗಿ

ಶೂರಕರ್ಣನ ಸ್ನೇಹದ ನೆರವು ದೊರೆತಾಗಿನಿಂದ ದುರ್ಯೋಧನನಲ್ಲಿ ಪ್ರಾಮುಖ್ಯವಾಗಿದ್ದ ದುರ್ಬುದ್ಧಿಗೆ ಇನ್ನಿಷ್ಟು ಕಳೆಬಂದಿತು. ಯಾವಾಗಲೂ ಅವನಲ್ಲಿ ಪಾಂಡವರನ್ನು ನಾಶಗೊಳಿಸುವ ದುಷ್ಟವಿಚಾರಗಳೇ ಮೂಡುತ್ತಿದ್ದವು. ಮತ್ತು ಅವಕ್ಕೆ ತಕ್ಕ ಕ್ರಿಯೆಗಳನ್ನು ಕರ್ಣನಂಥವರ ಸಹಾಯದಿಂದ ಮುಗಿಸುತ್ತಿದ್ದನು. ಒಂದಲ್ಲ, ಎರಡಲ್ಲ, ಹಲವುಬಾರಿ ಪಾಂಡವರ ವಧೋಪಾಯಗಳು ಎಸಗಲ್ಪಟ್ಟವು. ದುರ್ಯೋಧನನ ಈ ನೀಚ ವಿಚಾರ, ಕೃತಿಗಳ ಬಗೆಗೆ ಆತನ ತಂದೆ ಧೃತರಾಷ್ಟ್ರನ ಆದರವೂ ಒಳಿತಾಗಿ ಇದ್ದಿತು ಒಂದುಸಾರೆ ವಿದುರನು ಈ ಬಗೆಗೆ ಧೃತರಾಷ್ಟ್ರನಿಗೆ ಸ್ಪಷ್ಟವಾಗಿ– "ಪಾಂಡವರ ಅಹಿತವನ್ನು ಬಯಸುವದು ಹಿರಿಯರಾದ ನಿಮಗೆಂದಿಗೂ ಸಲ್ಲುವದಿಲ್ಲ" ಎಂದನು. ಅವಕ್ಕೆ ಆ ಮುದಿಧೃತರಾಷ್ಟ್ರನು–"ವಿದುರಾ! ನೀನು ಸದಾವ ಕಾಲವೂ ಪಾಂಡವರ ಗುಣಗಳನ್ನೇ ಕೊಂಡಾಡುವಿ. ಅಂದಮೇಲೆ ನನ್ನ ಹಾಗು ನನ್ನ ಮಕ್ಕಳ ಬಗೆಗೆ ನಿನ್ನಲ್ಲಿ ಕಲ್ಮಷವಿದ್ದಂ ತಾಯಿತು. ಆದ್ದರಿಂದ ನೀನೂ ಪಾಂಡವರನ್ನು ಸೇರು, ಅವರೊಡನೆ ವನಕ್ಕೆ ತೆರಳು" ಎಂದನು.

ಧೃತರಾಷ್ಟ್ರನು ವಿದುರನನ್ನು ಎಂದೂ ಕಡೆಗಣಿಸಿರಲಿಲ್ಲ. ಈಗ "ನೀನೂ ಪಾಂಡವರಜೊತೆ ಸೇರು" ಎಂದು ಹೇಳಿದ್ದರಲ್ಲಿ ಕೇವಲ ಆ ಧೃತರಾಷ್ಟ್ರನ ಅಂಗವಿರದೆ "ಅಂಗರಾಜ" ಮೊದಲಾದವರ ಅಂಗವಿತ್ತೆಂದು ಕೆಲವರ ಆಕ್ಷೇಪ. ನೀಚರ ಸ್ನೇಹದಿಂದ ನೀಚತನದ ಆರೋಪಗಳು ಬರುವವೆಂಬುದು ಸಿದ್ಧವಾದದ್ದು. ಈ ಮಾತಿನಿಂದ ಕರ್ಣನಿಗೆ ಆಕ್ಷೇಪಿಸುವದು ಯೋಗ್ಯವೋ ಅಯೋಗ್ಯವೋ ಎಂದು ನಿರ್ಣೈಸುವದು ಬುದ್ಧಿವಂತರ ಮಾತು.

ಒಂದು ಸಾರೆ ಧೃತರಾಷ್ಟ್ರ ದುರ್ಯೋಧನರು ತಮ್ಮ ಪಕ್ಷದ ಪ್ರಮುಖರನ್ನು ಕೂಡಿಕೊಂಡು ಪಾಂಡವರ ನಾಶಕ್ಕಾಗಿ ಯಾವ ಯಾವ ಉಪಾಯ ಕೈಕೊಳ್ಳತಕ್ಕದ್ದೆಂದು ಯೋಚಿಸಹತ್ತಿದರು. ಎಲ್ಲರೂ ಸಾಮಾನ್ಯವಾಗಿ 'ಅರಗಿನ ಮನೆಯಲ್ಲಿ ಸುಡುವದು, ದ್ರೌಪದಿ ಮಾನಭಂಗ ಮಾಡುವದು' ಇತ್ಯಾದಿ ಕುತ್ಸಿತ ಉಪಾಯ ಸೂಚಿಸಿದರು. ಆಗ ಕರ್ಣನು– ಈ ನಿಮ್ಮ ವಿಚಾರ

ಗಳನ್ನು ನಾನು ಒಪ್ಪಲಾರೆ. ನನ್ನ ಮಟ್ಟಿಗೆ ಹೇಳುವದಾದರೆ– 'ಪರಾಕ್ರಮಿಗಳಾದ ಪಾಂಡವರನ್ನು ಪರಾಕ್ರಮದಿಂದಲೇ ಮುರಿಬಡಿಯತಕ್ಕದ್ದು ಎಂದು ಹೇಳುವೆನು' ಎಂದನು.

ದ್ರೌಪದಿಯ ಸ್ವಯಂವರಕ್ಕೆ ಕೌರವರೂ, ಕರ್ಣನೂ ಒಳ್ಳೆ ಆಸೆಯಿಂದ ಹೋಗಿದ್ದರು. ಪಾಂಡವರು ಏಕಚಕ್ರನಗರದಲ್ಲಿಂದ ಬ್ರಾಹ್ಮಣವೇಷದಿಂದ ಹೋಗಿ ಬ್ರಾಹ್ಮಣರ ಗುಂಪಿನಲ್ಲಿ ಕುಳಿತಿದ್ದರು. ದ್ರೌಪದಿಯ ಪಣವನ್ನು ಗೆಲ್ಲುವದು ದುರ್ಯೋಧನನಿಂದಾಗಲಿಲ್ಲ. ಕರ್ಣನು ಪಣವನ್ನು ನಿಶ್ಚಯವಾಗಿ ಗೆಲ್ಲುವನೆಂಬ ಭರವಸೆ ಎಲ್ಲರಿಗೂ ಇದ್ದಿತು. ಆದರೆ ಸೂತಪುತ್ರನೆಂದು ಹೀಯಾಳಿಕೆಗೆ ಆತನು ಗುರಿಯಾಗಿ ಗುರಿಹೊಡೆಯಲಿಲ್ಲ. ರಾಜರುಗಳಿಂದಲೂ ಪಣಗೆದೆಯುವದಾಗಲಿಲ್ಲ. ಕೊನೆಗೆ ಬ್ರಾಹ್ಮಣರ ಗುಂಪಿನಲ್ಲಿದ್ದ ಬ್ರಾಹ್ಮಣವೇಷಧಾರಿ ಅರ್ಜುನನಿಂದ ಪಣವು ಗೆದೆಯಲ್ಪಟ್ಟಿತು. ಈ ಪಣಗೆದ್ದವನು ನಿಜವಾಗಿಯೂ ಅರ್ಜುನನೆಂದು ಕರ್ಣ, ದುರ್ಯೋಧನರಿಗೆ ವಿದಿತವಾಯಿತು. ಅವರು ತಮ್ಮನ್ನು ದ್ರೌಪದಿ ವರಿಸಲಿಲ್ಲೆಂಬ ಸಿಟ್ಟಿನಿಂದ ಆಕೆಯನ್ನು ಏನೊಂದು ಪರಿಯಿಂದ ಮಾನಭಂಗ ಮಾಡಿಯೇ ತೀರಬೇಕೆಂದು ನಿರ್ಧರಿಸಿದರು. ಈ ಅವರ ನಿರ್ಧಾರವೇ ಮುಂದೆ ಆ ದ್ರೌಪದಿಯ ವಸ್ತ್ರಹರಣಕ್ಕೆ ಆ ಕೌರವರನ್ನು ಪ್ರವೃತ್ತಗೊಳಿಸಿತು.

ಕೌರವನು ತಾನೊಂದು ಯಜ್ಞ ಮಾಡುವದಕ್ಕೆ ಧೃತರಾಷ್ಟ್ರನ ಅನುಮತಿ ಪಡೆದನು. ಕೇವಲ ಪಾಂಡವರ ನಾಶಕ್ಕಾಗಿಯೇ ಅವನು ಈ ಯಜ್ಞ ಹೂಡಿದನು. ಪಾಂಡವರನ್ನೂ ಯಜ್ಞಕ್ಕೆ ಆಮಂತ್ರಿಸಿದರು. ಯಜ್ಞ ಮುಕ್ತಾಯದ ನಂತರ ಆಟಪಾಟಗಳನ್ನು ಹೂಡಿದನು. ಕಡೆಗೆ ಅಕ್ಷಕ್ರೀಡೆ ಅಂದರೆ ಪಗಡಿಯಾಟವು ನಡೆಯಿತು. ಒಂದು ಕಡೆಗೆ ಕೌರವರು; ಇನ್ನೊಂದು ಕಡೆಗೆ ಪಾಂಡವರು. ಸೋತವರು ೧೨ ವರ್ಷ ವನವಾಸ ಅನುಭವಿಸುವ ಗೊತ್ತು ಮಾಡಲ್ಪಟ್ಟಿತು. ಆಟ ಸುರುವಾಯಿತು. ಮೊದಲು ಧರ್ಮನು ಕೌರವರೊಡನೆ ಆಟ ಸುರು ಮಾಡಿದನು. ಶಕುನಿಯ ಹೇಳಿಕೆಯಂತೆ ಅಮೂಲ್ಯ ವಸ್ತುಗಳನ್ನು ಪಣಕ್ಕಿಟ್ಟು ಸೋತನು. ಬಂಧುಗಳನ್ನು ಪಣಕ್ಕಿಟ್ಟು ಸೋತನು. ಇದರಂತೆ ರಾಜ್ಯ ಬೊಕ್ಕಸಗಳನ್ನೂ ಕಡೆಗೆ ಕೌರವರ ಒತ್ತಾಯದಿಂದ ದ್ರೌಪದಿಯನ್ನೂ ಪಣಕ್ಕಿಟ್ಟು ಸೋತನು. ಗೊತ್ತಿನಂತೆ ಪಾಂಡವರು

ವನವಾಸಕ್ಕೆ ಹೋಗಬೇಕಾಯಿತು. ಆಗಲೇ ದುರ್ಯೋಧನನು ಪಣದಲ್ಲಿ ಗೆದ್ದ ದ್ರೌಪದಿಯನ್ನು ಸಭೆಗೆ ತರಿಸಿದನು. ಯುಧಿಷ್ಠಿರನು ಕೌರವರಿಗೆ ದ್ರೌಪದಿಯನ್ನೂ ಪಣ ಹಚ್ಚಿ ಸೋತಿದ್ದನು. ಆದ್ದರಿಂದ 'ದುಃಶಾಸನನೇ ಈ ದಾಸೀ ಸ್ವರೂಪಕ್ಕೆ ಗುರಿಯಾದ ದ್ರೌಪದಿಯನ್ನು ನಿನ್ನ ಮನೆಗೆ ಎಳೆದೊಯ್ಯು' ಎಂದು ಕರ್ಣನ. ತನ್ನ ಅಭಿಪ್ರಾಯವನ್ನು ನುಡಿದನು. ಮತ್ತೂ ಆತನು ದ್ರೌಪದಿಯನ್ನು ಕುರಿತು- 'ದ್ರೌಪದಿ! ಪಾಂಡವರು ಸೋತು ಕೌರವರ ದಾಸರಾದರು. ನೀನು ದಾಸಪತ್ನಿಯಾದಿ, ನೀನು ಕೌರವನಿಂದ ಗೆಲ್ಲಲ್ಪಟ್ಟಿಯಾದುದರಿಂದ ದುರ್ಯೋಧನನು ನಿನ್ನ ಯಜಮಾನನಾದನು.' ಇತ್ಯಾದಿ ಹೀನೋಕ್ತಿಗಳನ್ನಾಡಿದನಲ್ಲದೆ ಇನ್ನೂ ಅನೇಕಾನೇಕ ದುರುಕ್ತಿಗಳನ್ನಾಡಿದನು. ಯುಧಿಷ್ಠಿರನನ್ನುಳಿದು ಪಾಂಡವರೆಲ್ಲರೂ ಕ್ರೋಧಗೊಂಡರು. ಆದರೆ ಮಾಡುವದೇನು? ಅವರಿಗೆ ಅಣ್ಣನ ಆಜ್ಞೆಯೊಂದು ಅಡ್ಡ ಬಾರದಿದ್ದರೆ ಕರ್ಣನ ಅವಸ್ಥೆ ಏನಾಗುತ್ತಿತ್ತೊ ಏನೋ! ಆನರೆ ಅವರೆಲ್ಲರು ಅದಾವ ಕ್ರಿಯೆ ಕೈಕೊಳ್ಳದೆ ವನವಾಸ ಕೈಕೊಂಡರು ವನಕ್ಕೆ ತೆರಳುವಾಗ ಭೀಮಾದಿ ಪಾಂಡವರು ಪ್ರತಿಯೊಬ್ಬರೂ- 'ವನವಾಸ ಮುಗಿಸಿ ಕೌರವನನ್ನೂ ಅವನ ಪಕ್ಷದವರನ್ನೂ ಕೊಂದು ನಿರ್ನಾಮಮಾಡುವೆವು'ಎಂದು ಪ್ರತಿಜ್ಞೆ ಮಾಡಿ ಹೋದರು.

ಇದಲ್ಲದೆ ಕರ್ಣನು ದ್ರೌಪದಿ ವಸ್ತ್ರಹರಣ ಪ್ರಸಂಗದಲ್ಲಿಯೂ ತನ್ನ ನಿಂದ್ಯ ವರ್ತನವನ್ನು ವ್ಯಕ್ತಪಡಿಸಿದನು.

ಈ ಎಲ್ಲ ಪ್ರಸಂಗಗಳು ಕರ್ಣನ ಶೂರತನಕ್ಕೆ ಕಲಂಕವನ್ನು ತೊಡೆದವಲ್ಲದೆ ಮುಂದೆ ಅರ್ಜುನನಿಂದ ಅವನು ಹತನಾಗುವದಕ್ಕೆ ಪೂರ್ವ ಕಾರಣಗಳಾದವು.

## ಗಂಧರ್ವರೊಡನೆ ಕರ್ಣನ ಯುದ್ಧ

ಪಾಂಡವರು ವನವಾಸ ಸ್ವೀಕರಿಸಿ ದ್ವೈತ ವನದಲ್ಲಿ ಬಂದು ಇದ್ದರು. ಆಗ ಕೌರವರು ಆ ಪಾಂಡವರಿಗೆ ತಮ್ಮ ಅಹಂಕಾರ, ಬಲದರ್ಪಗಳನ್ನು ತೋರಿಸುವ ಉದ್ದೇಶದಿಂದ ಸೈನ್ಯ ಸಹಿತ ಅಲ್ಲಿಗೆ ಬಂದರು. ಆ ವನದ ಒಂದು ಸರೋವರದಲ್ಲಿ ಚಿತ್ರಸೇನ ಗಂಧರ್ವನ ಪರಿವಾರವು ಜಲಕ್ರೀಡೆಗಿಳಿದಿತ್ತು. ದುರ್ಯೋಧನನು ಅದನ್ನು ತಿಳಿದು ತನ್ನ ಸೈನ್ಯವನ್ನು ಆ ಗಂಧರ್ವರ ಮೇಲೆ ಕಳುಹಿದನು. ಆಗ ಚಿತ್ರಸೇನನ ಕಡೆಯ ಗಂಧರ್ವರು ದುರ್ಯೋಧನನನ್ನು

ತಿರಸ್ಕರಿಸಿ ಕೌರವ ಸೈನ್ಯವನ್ನೆಲ್ಲ ಹಣಿದು ಓಡಿಸಿದರು. ಕರ್ಣನು ದುರ್ಯೋಧನನ ವೈಗಾವಲಿಗೆ ನಿಂತನು. ಅವನು ತನ್ನ ಕೌರವ ಸೈನ್ಯದ ದುರವಸ್ಥೆ ಕಂಡು ಗಂಧರ್ವರ ದೊಡ್ಡ ಸೈನ್ಯದೊಡನೆ ಕಾದಹತ್ತಿದನು ದುರ್ಯೋಧನ ಮೊದಲಾದವರು ಒಬ್ಬನೇ ಕಾದುತ್ತಿದ್ದ ಕರ್ಣನ ಸಹಾಯಕ್ಕೆ ಬಂದರು. ಕರ್ಣನ ಹೊಡೆತದಿಂದ ಗಂಧರ್ವರು ಹೈರಾಣಾಗಹತ್ತಿದರು. ಆಗ ಚಿತ್ರಸೇನನು ತಾನೇ ರಣಭೂಮಿಗಿಳಿದು ಒಬ್ಬೊಬ್ಬ ಕೌರವ ಸೈನಿಕನ ಜೊತೆಗೆ ಕಾದಲು ಹತ್ತಾತ್ತು ಜನ ಗಂಧರ್ವರನ್ನು ನಿರ್ಮಿಸಿ ನೇಮಿಸಿದನು. ಇದರಿಂದ ಕರ್ಣನ ಸೇನೆ ದಿಕ್ಕೆಟ್ಟು ಓಡಿಹೋಯಿತು. ಈ ಸಾರೆಯೂ ಆತನೊಬ್ಬನೇ ಅಚಲನಾಗಿ ನಿಂತನು. ಅಷ್ಟರಲ್ಲಿ ಸಾವಿರಾರು ಗಂಧರ್ವರು ಕರ್ಣನನ್ನು ಮುತ್ತಿ ಅವನ ರಥ ಧ್ವಜಗಳನ್ನು ಮುರಿದು ಹರಿದೊಗೆದರು. ಕರ್ಣನು ಕಡೆಗೆ ವಿಕರ್ಣನರಥದಲ್ಲಿ ಕುಳಿತು ರಣಭೂಮಿಯಿಂದಕಾಲ್ದೆಗೆದನು. ಇಂತುಕರ್ಣನು ಗಂಧರ್ವರೊಡನೆ ಯುದ್ಧಮಾಡಿ ಪರಾಜಿತನಾದನು. ಇದೇ ಯುದ್ಧದಲ್ಲಿ ದುರ್ಯೋಧನನನ್ನು ಗಂಧರ್ವರು ಹೆಡಮುರಿಕಟ್ಟಿಒಯ್ದರು. ಆಗ ಪಾಂಡವರು ಬಂಧುವಾದ ದುರ್ಯೋಧನನನ್ನು ಗಂಧರ್ವರೊಡನೆ ಕಾದಿ ಬಂಧಮುಕ್ತಮಾಡಿದರು. ಇದು ದುರ್ಯೋಧನನಿಗೆ ಅಸಹ್ಯವೆನಿಸಿತು. ಆಗ ಅವನು ತನ್ನಜೀವಿತದ ಬಗ್ಗೆ ಉದಾಸೀನನಾಗಿಪ್ರಾಯೋಪವೇಶನದಿಂದ ಪ್ರಾಣಬಿಡಲುಸಿದ್ಧನಾದನು.

ದುರ್ಯೋಧನನು ಗಂಧರ್ವರಿಂದ ಬಿಡುಗಡೆ ಹೊಂದಿ ಸೈನ್ಯಸಹಿತ ಹೊರಟನು. ಪಾಂಡವರು ತನ್ನ ಇಚ್ಛೆಯಿಲ್ಲದೆ ಬಂದು ತನ್ನನ್ನು ಮುಕ್ತ ಮಾಡಿದುದು ಅವನ ಹೃದಯ ಕೊರೆಯಹತ್ತಿತು. ಅದಕ್ಕಾಗಿಯೇ ಅವನು ತನ್ನ ಪ್ರಾಣಬಿಡಲು ಉದ್ಯುಕ್ತನಾದನು. ತಾನು ಹೋಗುವ ಮಾರ್ಗದಲ್ಲಿ ಒಂದು ಜಲ-ತೃಣಗಳಿಂದ ಪೂರ್ಣವಾದ ಸ್ಥಾನದಲ್ಲಿ ತನ್ನ ಬೀಡು ಬಿಟ್ಟನು. ತನಗಾಗಿ ಒಂದು ಮಂಚವನ್ನು ಅಳವಡಿಸಿಕೊಂಡನು ಅದರಮೇಲೆ ವಿಷಣ್ಣ ಮನಸ್ಸಿನಿಂದ ಕುಳಿತುಕೊಂಡನು. ನಿರ್ಜಲ-ನಿರಾಹಾರಗಳಿಂದ ತನ್ನ ಪ್ರಾಣಗಳನ್ನು ರೋಧಿಸಿ ದೇಹ ನೀಗಲು ಉಪಕ್ರಮಿಸಿದನು. ಆಗ ಕರ್ಣನು ಅಲ್ಲಿಗೆ ಬಂದನು. ಅವನಿಗೆ ದುರ್ಯೋಧನನ ಬಂಧನ-ಬಿಡುಗಡೆ ಇದಾವ ವಿಷಯವೂ ಗೊತ್ತಿದ್ದಿಲ್ಲ. ದುರ್ಯೋಧನನು ನಿಜವಾಗಿಯೂ ಗಂಧರ್ವರನ್ನು ಜಯಿಸಿ ಬಂದಿರಬಹುದೆಂದು ಆತನು ನಂಬಿ ದುರ್ಯೋಧನ

ನನ್ನು ತನ್ನ ಯುಕ್ತವಚನಗಳಿಂದ ಆಭಾರಮನ್ನಿಸಹತ್ತಿದನು. ಆಗ ದುರ್ಯೋಧನನು ಆತನೊಡನೆ ಏನೊಂದು ನುಡಿಯದೆ ಒಂದು ಕಾಗದದ ಮೇಲೆ-'ಕರ್ಣ! ನಾನಂತೂ ಪಾಂಡವರ ಅನಿರೀಕ್ಷಿತ ಹಾಗು ಅನೈಚ್ಛಿಕ ಸಹಾಯದಿಂದ ಗಂಧರ್ವರಿಂದ ಬಿಡುಗಡೆ ಹೊಂದಿ ನಿರ್ಲಜ್ಜನಾದೆನು. ನನಗಿರುವ ಅತಿರಥ-ಮಹಾರಥಿಗಳ ಸಹಾಯವು ನನಗೆ ಸಮಯಕ್ಕೊದಗಲಿಲ್ಲ. ಇದರಿಂದ ನಾನು ಇಂದಿನಿಂದಲೇ ಪ್ರಾಯೋಪವೇಶನದ ವ್ರತ ತೆಗೆದುಕೊಂಡಿರುವೆನು. ನೀನು ಹಸ್ತಿನಾವತಿಗೆ ತೆರಳು. ದುಶ್ಶಾಸನನಿಗೆ ಪಟ್ಟಗಟ್ಟು. ವೀರಾಧಿವೀರರ ನೆರವಿನಿಂದ ರಾಜ್ಯಶಕಟವನ್ನು ಸಾಗಿಸಲು ಆತನಿಗೆ ಉಪದೇಶಮಾಡು, ನನ್ನ ಮಾತಾಪಿತೃಗಳಿಗೆ ನನ್ನ ಕೊನೆಯ ವಂದನೆಗಳನ್ನು ಸಲ್ಲಿಸು' ಎಂಬದಾಗಿ ಬರೆದಿಟ್ಟನು. ಅದನ್ನು ಕಂಡು ಕರ್ಣನು ದಿಗಿಲುಗೊಂಡನು. ತನ್ನ ಪರೋಕ್ಷದಲ್ಲಿ ನಡೆದ ಯಾವತ್ತು ಸಂಗತಿಗಳನ್ನು ಆತನು ತಿಳಿದುಕೊಂಡನು. ದುರ್ಯೋಧನನಿಗುಂಟಾಗಿದ್ದ ವಿಷಾದವನ್ನು ದೂರಮಾಡಿ ಅವನನ್ನು ಪುನಃ ಕಾರ್ಯತತ್ಪರನನ್ನಾಗಿ ಮಾಡುವದು ತನ್ನ ಧರ್ಮವು ಎಂದು ಮನಸ್ಸಿನಿಂದ ತಿಳಿದುಕೊಂಡನು. ಆಗಲೆ ಆತನು ದುರ್ಯೋಧನನೆದುರು ನಿಂತು-'ರಾಜ! ಈ ನಿನ್ನ ಪ್ರಾಯೋಪವೇಶನವ್ರತವನ್ನು ಬಿಟ್ಟುಬಿಡು. ನಾನು ಬ್ರಹ್ಮಾಸ್ತ್ರ ಪಡೆದ ವೀರನು. ನಿನಗಾಗಿದ್ದ ವಿಷಾದವನ್ನು ನನ್ನ ಭುಜಬಲದಿಂದ ದೂರಮಾಡಿಯೇ ತೀರುವೆನು. ಕ್ಷಣಮಾತ್ರದಲ್ಲಿ ಪಾಂಡವರನ್ನು ತೃಣಕ್ಕೆ ಸರಿಯಾಗಿ ಮಾಡುವೆನು. ಈಗಲೇ ನನಗೆ ದಿಗ್ವಿಜಯಕ್ಕಾಗಿ ಅಪ್ಪಣೆಕೊಡು. ಮತ್ತು ನಿನ್ನ ಈ ವ್ರತವನ್ನು ಬಿಟ್ಟುಬಿಡು.' ಎಂದು ಧನುಷ್ಟಂಕಾರವನ್ನು ಹುಟ್ಟಿಸಿ ಮಾತಾಡಿ ತನ್ನ ಉತ್ಸುಕತೆಯನ್ನು ತೋರಿದನು. ಅಲ್ಲದೆ ಅರ್ಜುನನನ್ನು ಕೊಲ್ಲದೆ ನಾನು ಮಾಂಸ ಭಕ್ಷಿಸಲಾರೆನೆಂದನು. ಕರ್ಣನ ನುಡಿಗಳಿಗೂ ಅವನು ಕೈಕೊಂಡ ಪ್ರತಿಜ್ಞೆಗೂ ದುರ್ಯೋಧನನು ಒಳ್ಳೇ ಸಂತೋಷಭರಿತನಾದನು. ಕರ್ಣನ ಎಲ್ಲ ಮಾತುಗಳಿಗೆ ಅನುಮೋದನವಾಗಿ ಶಕುನಿಯೂ ಇತರರೂ ಮಾತಾಡಿದರು. ಅವರೆಲ್ಲರೂ 'ಈ ನಿನ್ನ ಪ್ರಾಯೋಪವೇಶನದಿಂದ ಜಗತ್ತೆಲ್ಲವೂ ನಿನ್ನನ್ನು ಹೇಡಿಯೆಂದು ನುಡಿಯುವದು' ಎಂದೂ 'ಕೌರವ ಕುಲಕ್ಕೆ ಕಲ್ಪಾಂತ್ಯದ ವರೆಗೆ ಕಲಂಕ ತಟ್ಟುವದು' ಎಂದೂ ಹೇಳಿದರು.

ಕೊನೆಗೆ ಇವರೆಲ್ಲರ ಹೇಳಿಕೆ ಬೇಡಿಕೆಗಳನ್ನು ಮನ್ನಿಸಿ ದುರ್ಯೋಧನನು ತನ್ನ ಪ್ರಾಯೋಪವೇಶನದಿಂದ ಪರಾವೃತ್ತನಾಗಿ ಎದ್ದನು. ಮತ್ತು ಕರ್ಣ ನನ್ನು ಅಪ್ಪಿಕೊಂಡು– 'ಮಿತ್ರಾ! ದಿಗ್ವಿಜಯವನ್ನು ಯಶಸ್ವಿಯಾಗಿ ಕೊನೆ ಗಾಣಿಸಿಕೊಂಡು ಬಾ' ಎಂದು ಹರಸಿ ಕಳಿಸಿದನು. ಮತ್ತು ತಾನು ತನ್ನ ಸೈನ್ಯ ಸಹಿತ ಹಸ್ತಿನಾಪುರವನ್ನು ಬಂದು ಸೇರಿದನು.

## ಕರ್ಣನ ದಿಗ್ವಿಜಯ

ಕರ್ಣನು ದುರ್ಯೋಧನನಿಂದ ಅನುಜ್ಞಿತನಾಗಿ ಕೂಡಲೆ ಶುಭ ಮುಹೂರ್ತದಲ್ಲಿ ದಿಗ್ವಿಜಯಕ್ಕಾಗಿ ಹೊರಟನು. ತನ್ನ ಚತುರಂಗ ಬಲ ದೊಡನೆ ಮೊದಲಿಗೇ ಆತನು ದ್ರುಪದನ ಪಟ್ಟಣವನ್ನು ಮುತ್ತಿ ಅವನನ್ನು ಮೆತ್ತಗೆ ಮಾಡಿದನು. ಅಲ್ಲಿಂದ ಹೇರಳ ಕಪ್ಪುಕಾಣಿಕೆಯನ್ನು ಪಡೆದು ಉತ್ತರ ದಿಕ್ಕಿನ ನಾಡುಗಳಿಗೆ ದಿಗ್ವಿಜಯ ಬೆಳೆಸಿದನು. ಮಾರ್ಗದಲ್ಲಿ ಮಹಾ ಬಲಾಢ್ಯ ಭಗದತ್ತನನ್ನು ಸದೆದು ಹಿಮಾಚಲದ ಕಡೆಗೆ ನಡೆದನು. ಅಲ್ಲಿಯ ಗುಡ್ಡಗಾಡಿನ ಪ್ರದೇಶದ ಚಿಕ್ಕ ದೊಡ್ಡ ರಾಜರುಗಳನ್ನು ಯುದ್ಧ ಒಪ್ಪಂದ ಗಳಿಂದ ಎದ್ದೇಳದಂತೆ ಮಾಡಿದನು. ಕಡೆಗೆ ನೇಪಾಳ ರಾಜನ ಗರ್ವವನ್ನಡ ಗಿಸಿ ಪೂರ್ವ ದಿಕ್ಕಿಗೆ ತೆರಳಿದನು. ತನ್ನ ಅಂಗದೇಶದ ಹೊರಗಿದ್ದ ವಂಗ, ಕಲಿಂಗ, ಮಗಧ, ಮಿಥಿಲೆ ಮುಂತಾದ ದೇಶಗಳನ್ನೆಲ್ಲ ಗೆದ್ದನು. ಕಡೆಗೆ ಅವ ಶಿರ, ಅಹಿಚ್ಛತ್ರಗಳನ್ನು ವಶಪಡಿಸಿಕೊಂಡು ಪೂರ್ವ ದಿಶೆಯಿಂದ ನಿರ್ಧನ ಪ್ರದೇಶವಾದ ವತ್ಸಭೂಮಿಗೆ ಬಂದನು. ಅವನ್ನೂ ಮೋಹನಪುರ, ತ್ರಿಪುರ ಮುಂತಾದವನ್ನೂ ಜಯಿಸಿ ದಕ್ಷಿಣಕ್ಕೆ ನಡೆದನು. ಆತನ ಸಮಬಲಶಾಲಿ ರುಕ್ಮಿ ಯೊಡನೆ ಉತ್ಸಾಹದಿಂದ ಯುದ್ಧ ಮಾಡಿ ಒಡಂಬಡಿಕೆ ಮಾಡಿಕೊಂಡನು. ಅಲ್ಲಿಂದ ಮುಂದೆ ಪಾಂಡ್ಯ, ಕೇರಳ ರಾಜರನ್ನೂ ಶೈಶುಪಾಲಿಯನ್ನೂ ಗೆದ್ದನು. ತದನಂತರ ಉಜ್ಜಯಿನಿಪುರದ ರಾಜನೊಡನೆ ತಹಮಾಡಿಕೊಂಡು ಯಾದವ ರನ್ನು ಹಣ್ಣುಗಾಯಿ ಮಾಡಿದನು. ಇಂತು ಪಶ್ಚಿಮನಾಡಿನ ದಿಗ್ವಿಜಯ ಮುಗಿಸಿಕೊಂಡು ಹೊರನಾಡಾದ ಯವನ, ಬರ್ಬರ ದೇಶಗಳನ್ನು ಗೆದ್ದನು. ಇಷ್ಟೆಲ್ಲ ಮುಗಿಸಿದ ನಂತರ ಒಳನಾಡಿನಲ್ಲಿರುವ ಭದ್ರ, ರೋಹಿತಕ, ಮಾಲವ, ಶಶಕ, ಸಗ್ನಜಿತ್ ಮುಂತಾದ ಮಹಾರಥಿಕರನ್ನು ಗೆದ್ದು ರಣಧೀರ ಕರ್ಣನು

ಹಸ್ತಿನಾಪುರಕ್ಕೆಬಂದು ದುರ್ಯೋಧನನಿಗೆ ಪೊಡಮಟ್ಟನು. ಆತನು ವಿಜಯಿ ಕರ್ಣನನ್ನು ಅಪ್ಪಿಕೊಂಡು– "ಕರ್ಣಾ! ಭೀಷ್ಮದ್ರೋಣಾದಿಗಳಿಗೆ ಅಸಾಧ್ಯವಾಗಿದ್ದ ದಿಗ್ವಿಜಯ ದೊರಕಿಸಿದ ನಿನ್ನಿಂದೆ ನಾನು ಸನಾಥನಾದೆನು" ಎಂದು ತನ್ನ ಹೃದ್ಗಳಿತ ವಾಕ್ಯವನ್ನು ಆಡಿ ಅಭಿನಂದಿಸಿದನು. ಮತ್ತು ತನ್ನ ಬಲಾಢ್ಯತೆಯ ನಿದರ್ಶಕವೆಂದು 'ವಿಷ್ಣುಯಾಗ' ಎಂಬ ಯಜ್ಞವನ್ನು ಬಲು ಸಂಭ್ರಮದಿಂದ ನಡೆಸಿದನು.

## ಕುಂಡಲ ಹರಣ

ಪಾಂಡವರು ವನವಾಸ ಭೋಗಿಸುತ್ತ ದ್ವೈತ ವನದಲ್ಲಿರುವಾಗಲೇ ಅವರಿಗೆ ಕರ್ಣನ ದಿಗ್ವಿಜಯ ವಾರ್ತೆಯೂ, ದುರ್ಯೋಧನನು ಮಾಡಿದ ವಿಷ್ಣುಯಾಗದ ಸಂಗತಿಯೂ ವಿದಿತವಾಯಿತು. ಅದರೊಡನೆ ಕರ್ಣನು 'ಅರ್ಜುನನನ್ನು ಕೊಲ್ಲದೆ ನಾನು ಮಾಂಸ ಭಕ್ಷಿಸುವದಿಲ್ಲೆ'ಂದು ಮಾಡಿದ ಪ್ರತಿಜ್ಞೆಯೂ, ಸೆರೆ ಕುಡಿಯುವದಿಲ್ಲೆಂದು ಮಾಡಿದ ಅವನ ಅಸುರ ವ್ರತವೂ ಇವೆಲ್ಲವು ಪಾಂಡವರಿಗೆ ತಿಳಿದವು. ನಿಜಕ್ಕೂ ಕರ್ಣನ ಈ ಪ್ರತಿಜ್ಞೆಯಿಂದ ಪಾಂಡವರಲ್ಲಿ ಭಯಹುಟ್ಟಿತು. ಅಂದಿನ ದಿನ ರಾತ್ರಿಯಲ್ಲಿ ಧರ್ಮರಾಜನ ಸ್ವಪ್ನದಲ್ಲಿ ಒಂದು ಜಿನ ಮೃಗವು ಬಂದು– 'ನೀವು ಈ ದ್ವೈತ ವನ ಬಿಟ್ಟು ತೆರಳಿರಿ' ಎಂದು ಹೇಳಿದಂತಾಯಿತು. ಕರ್ಣನ ಭಯ ಹಾಗು ಸ್ವಪ್ನ ಮೃಗದ ಭಯ ಇವುಗಳಿಗಂಜಿ ಪಾಂಡವರು ಆ ವನ ಬಿಟ್ಟು 'ಕಾಮ್ಯಕ ವನ'ಕ್ಕೆ ತೆರಳಿದರು.

ಅಷ್ಟರಲ್ಲಿ ಅರ್ಜುನನ ಹಿತವನ್ನು ಬಯಸಿ ಇಂದ್ರನು– 'ಕರ್ಣನಿಂದ ಕುಂಡಲಗಳನ್ನು ನಾನು ಹರಣ ಮಾಡಿದರೆ ಪಾಂಡವರು ಜಯಶಾಲಿಗಳಾಗುವರು ಕರ್ಣನ ಅರ್ಜುನನನ್ನು ಕೊಲ್ಲುವ ಪ್ರತಿಜ್ಞೆ ವ್ಯರ್ಥವಾಗುವದು' ಎಂದು ವಿಚಾರಿಸಿ ಬ್ರಾಹ್ಮಣ ವೇಷ ಧರಿಸಿ ಕರ್ಣನ ಬಳಿಗೆ ಹೋಗಿ ದಾನ ಬೇಡಿ ಆತನ ಕುಂಡಲವನ್ನು ಹರಣ ಮಾಡಿಕೊಂಡು ಹೋದನು. ಕುಂಡಲ ದಾನ ನೀಡುವ ಮೊದಲು ಸೂರ್ಯನು ಪುತ್ರ ಮೋಹದಿಂದ ಕರ್ಣನಿಗೆ— 'ಇಂದ್ರನು ನಿನ್ನಿಂದ ದಾನವಾಗಿ ಕುಂಡಲ ಕೇಳುವನು. ಕೊಡಬೇಡ' ಎಂದು ತಿಳಿಸಿದ್ದನು. ಅದಕ್ಕೆ ಕರ್ಣನು ಒಪ್ಪಿದ್ದಿಲ್ಲ. ಬೇಡಬಂದವರಿಗೆ ಬೇಕಾದದ್ದನ್ನು ನೀಡುವ 'ಕೊಡುಗೈಗಲಿ ಕರ್ಣ'ನಾತನು. ಆದುದ

ರಿಂದಲೇ ಬ್ರಾಹ್ಮಣ ವೇಷಧಾರಿ ಇಂದ್ರನಿಗೆ ಕುಂಡಲ ದಾನ ನೀಡಿದನು. ಇಂದ್ರನು ಅವನಿಗೆ ಪ್ರತಿಯಾಗಿ 'ಶತ್ರುನಾಶಿನಿಅಮೋಘಶಕ್ತಿ'ಯನ್ನು ನೀಡಿ 'ಈ ನನ್ನ ಶಕ್ತಿಯು ನಿನ್ನ ಒಬ್ಬ ಪ್ರಬಲ ಶತ್ರುವನ್ನು ಕೊಂದು ತಿರುಗಿ ನನ್ನ ಕೈಗೇ ಬರುವದು' ಎಂದು ಹೇಳಿದನು.

ಈ ಪ್ರಕಾರ ಇಂದ್ರನು ಪಾಂಡವರ ಹಿತಕ್ಕಾಗಿ ಕರ್ಣನಿಂದ ಕುಂಡಲ ಹರಣ ಮಾಡಿಕೊಂಡು ಹೋದನು. ಈ ವಾರ್ತೆಯು ಕಾಮ್ಯಕ ವನದಲ್ಲಿದ್ದ ಧರ್ಮರಾಯನಿಗೆ ತಿಳಿದು 'ಇನ್ನು ಮೇಲೆ ಕರ್ಣನಿಂದ ಅರ್ಜುನನಿಗೆ ಮರಣದ ಭಯ ತಪ್ಪಿತು' ಎಂದು ತಿಳಿದುಕೊಂಡನು.

## ಗೋಗ್ರಹಣದಲ್ಲಿ ಕರ್ಣನ ಯುದ್ಧ

ಪಾಂಡವರು ವನವಾಸ ಮುಗಿಸಿ ಅಜ್ಞಾತವಾಸವನ್ನು ವಿರಾಟ ನಗರದಲ್ಲಿ ಕಳೆಯ ಹತ್ತಿದರು. ಅವರು ಪ್ರತಿಯೊಬ್ಬರು ಬೇರೆ ಬೇರೆ ವೇಷಧರಿಸಿಕೊಂಡು ವಿರಾಟನ ಅರಮನೆಯಲ್ಲಿದ್ದರು. ಕೌರವರು ಪಾಂಡವರನ್ನು ಶೋಧಿಸುವದರಲ್ಲಿದ್ದರು. ಅವರ ಶೋಧವಾದರೆ ಪುನಃ ೧೨ ವರುಷ ಅವರನ್ನು ವನವಾಸಕ್ಕೆ ನೂಕುವ ಹವಣಿಕೆಯು ಅವರದಿದ್ದಿತು. ಆದರೆ ಅವರ ಹುಡುಕುವಿಕೆಗೆ ಎಲ್ಲಿಯೂ ಪಾಂಡವರ ಸುಳಿವು ಹತ್ತಲಿಲ್ಲ.

ಕೀಚಕನು ವಿರಾಟರಾಜನ ಬೀಗನು. ಬಲು ದುಷ್ಟನು. ವಿರಾಟನ ಅರಮನೆಯಲ್ಲಿ ಗುಪ್ತ ವೇಷದಿಂದ ದ್ರೌಪದಿಯು ವಿರಾಟ ಪತ್ನಿಯ ತೊತ್ತಾಗಿ ದುಡಿಯುತ್ತಿದ್ದಳು. ಅವಳ ಸ್ವಾಭಾವಿಕವಾದ ಚೆಲುವಿಕೆಯನ್ನು ಕೀಚಕನು ಕಂಡು ಮೋಹಿಸಿದ. ಆಕೆಯೊಡನೆ ಅಲ್ಲದ ಚೇಷ್ಟೆಗಳನ್ನು ಮಾಡಲೆತ್ನಿಸಿದ. ಪತಿವ್ರತಾಶಿರೋಮಣಿ ದ್ರೌಪದಿಯು ಗುಪ್ತ ವೇಷದಿಂದ ಅಡಿಗೆಯವನಾಗಿದ್ದ ತನ್ನ ಗಂಡ ಭೀಮನಿಗೆ ಈ ವಾರ್ತೆಯನ್ನು ತಿಳಿಸಿದಳು. ಆಗ ಭೀಮನು ಒಂದು ರಾತ್ರಿಯಲ್ಲಿ ಆ ಶೂರ, ದುಷ್ಟ ಕೀಚಕನನ್ನು ಮೆಟ್ಟಿ ತುಳಿದನು. ಕೀಚಕನನ್ನು ಭೀಮನೇ ಕೊಂದನೆಂಬುದು ಆದಾರಿಗೂ ತಿಳಿಯಲಿಲ್ಲ.

ಕೀಚಕನನ್ನು ಅದಾರೋ ಕೊಂದರೆಂಬ ವಾರ್ತೆಯು ಪಾಂಡವರ ಶೋಧದಲ್ಲಿದ್ದ ಕೌರವರಿಗೆ ತಿಳಿಯಿತು. ಕೀಚಕನ ಬಲಾಢ್ಯತೆಯು ಅವರಿಗೆ ಚೆನ್ನಾಗಿ ಗೊತ್ತಿದ್ದಿತು. ಇಂಥ ಶೂರ ಕೀಚಕನ ವಧೆಯು ಒಂದೇ ರಾತ್ರಿಯ

ಲ್ಲಾಗಬೇಕಾದರೆ ನಿಜಕ್ಕೂ ಭೀಮನಿಂದ ಈ ವಧೆಯಾಗಿರಬಹುದೆಂದ ಅವರು ಅನುಮಾನಿಸಿದರು. ತಮ್ಮ ಆ ಸಂಶಯಕ್ಕನುಸರಿಸಿ ಪಾಂಡವರು ವಿರಾಟ ನಗರದಲ್ಲಿಯೇ ಇರುವರೆಂದು ತರ್ಕಿಸಿ ಪಾಂಡವ ಶೋಧಕರು ವಿರಾಟ ನಗರದ ಬಹಿರ್ಭಾಗಕ್ಕೆ ಬಂದರು. ವಿರಾಟನ ಗೋವುಗಳನ್ನು ಹರಣ ಮಾಡಿದರು. ಕೌರವರಿಂದ ತನ್ನ ಆಕಳುಗಳು ಅಪಹರಿಸಲ್ಪಟ್ಟವೆಂದು ವಿರಾಟನಿಗೆ ತಿಳಿಯಿತು. ಅವನ್ನು ಬಿಡಿಸಿ ತರಲು ತನ್ನ ಮಗ ಉತ್ತರಕುಮಾರನನ್ನು ಸಸೈನ್ಯವಾಗಿ ಕಳಿಸಿದನು.

ಉತ್ತರಕುಮಾರನು ರಣಹೇಡಿಯು. ಬೃಹನ್ನಳೆಯೆಂದು ಹೆಸರಿಟ್ಟುಕೊಂಡು ಅರಮನೆಯಲ್ಲಿದ್ದ ಅರ್ಜುನನು ಉತ್ತರಕುಮಾರನ ರಥದ ಸಾರಥಿಯಾಗಿ ರಣಕ್ಕೆ ಹೋದನು. ಅಲ್ಲಿ ಉತ್ತರಕುಮಾರನನ್ನು ಹಿಂದಿರಿಸಿಕೊಂಡ ತಾನೇ ಕೌರವ ಸೇನೆಯನ್ನು ಸೇರಿ ಸದೆಯ ಹತ್ತಿದನು. ಕೌರವರ ಸೈನ್ಯದಲ್ಲಿದ್ದ ಭೀಷ್ಮ, ದ್ರೋಣರೊಡನೆ ಕಾದಿದನು. ಕರ್ಣನ ಅಣ್ಣ ಶೋಣಾಶ್ವನ ಕುದುರೆಗಳನ್ನು ಕೊಂದನು. ಇದೆಲ್ಲ ದುರವಸ್ಥೆಯನ್ನು ಕಂಡು ಕರ್ಣನು ಸಜ್ಜಾಗಿ ಬಂದು ವಿರಾಟನಸೈನ್ಯವನ್ನು ಎದುರಿಸಿದನು. ಕರ್ಣನಿಗೆ ಅರ್ಜುನನ ಇರುವಿಕೆ ತಿಳಿಯದೆ ಹೋರಾಡ ಹತ್ತಿದನು. ಇಬ್ಬರಲ್ಲಿಯೂ ಪ್ರಹಾರ-ಪ್ರತಿಪ್ರಹಾರ ನಡೆದವು. ಕರ್ಣನು ಉತ್ತರಕುಮಾರನ ಅರ್ಥಾತ್ ಅರ್ಜುನನ ಶಸ್ತ್ರಾಸ್ತ್ರಗಳನ್ನು ಕೆಲಸಕ್ಕೆ ಬಾರದಂತೆ ಮಾಡಿದನು. ಆಗ ಅರ್ಜುನನು ನಿದ್ರಿಸುತ್ತಿದ್ದ ಸಿಂಹವು ಎದ್ದು ಆರ್ಭಟಿಸುವಂತೆ ಗರ್ಜಿಸಿ ಕರ್ಣನ ಮೇಲೆ ಬಾಣಗಳ ಮಳೆಗರೆದನು. ಕರ್ಣನ ಅವಯವಗಳೆಲ್ಲವನ್ನೂ ಬಾಣಗಳಿಂದ ಮುಚ್ಚಿ ವ್ಯಥೆ ಪಡಿಸಿದನು. ಕಡೆಗೆ ಕರ್ಣನು ಕಾಳಗ ಕಣದಿಂದ ಕಾಲ್ದೆಗೆದು ಓಡಿಹೋದನು. ದ್ರೋಣ-ಕೃಪರೂ ಓಡಿಹೋದರು. ಕರ್ಣನು ಸಾವರಿಸಿ ಮತ್ತೆ ಕಾಳಗಕ್ಕೆ ಅಣಿಯಾಗಿ ಬಂದ ಕೂಡಲೆ ಅರ್ಜುನನು:- 'ಕರ್ಣಾ! ನನ್ನೊಡನೆ ಯುದ್ಧ ಮಾಡು. ನಿನ್ನ ಪ್ರತಿಜ್ಞೆಗಳೆಲ್ಲವೂ ಇಂದು ಮುಕ್ತಾಯ ಹೊಂದಲಿ, ಅವನ್ನೆಲ್ಲ ಸತ್ಯವಾಗಿ ಮಾಡಿ ತೋರಿಸು' ಎಂದು ಮೂದಲಿಸಿ ನುಡಿದನು. ಆಗ ಅರ್ಜುನನ ಸಾಮರ್ಥ್ಯದೆದುರು ಯಾರ ಆಟವೂ ಸಾಗದ್ದರಿಂದ ಅವರೆಲ್ಲರೂ ಪರಾಜಯವನ್ನು ಹೊಂದಿ ಹಿಂತಿರುಗಿದರು. ಅರ್ಜುನನು ಆಕಳುಗಳ ಸಹಿತವಾಗಿ ವಿರಾಟ ನಗರಕ್ಕೆ ತಿರುಗಿದನು. ಇಷ್ಟಾದರೂ ಅರ್ಜುನನ ಇರು

ವಿಕೆ ಕೌರವರಿಗೆ ತಿಳಿಯಲಿಲ್ಲ. ಅಂದಿಗೇ ವನವಾಸ ಮುಕ್ತಾಯದ ದಿನವಿದ್ದು ದರಿಂದ ಕೌರವರೆಲ್ಲರೂ ಪರಾಜಯದ ವಿಸ್ಮೃತಿಯಲ್ಲಿ ಎಲ್ಲವನ್ನೂ ಮರೆತು ಹಿಂತಿರುಗಿದರು.

ಇಂತು ವಿರಾಟನಗರದ ಯುದ್ಧದಲ್ಲಿ ಶೂರ ಕರ್ಣನಿಗೆ ಸೋಲುಂಟಾಯಿತು.

## ಭೀಷ್ಮನೊಡನೆ ಕರ್ಣನ ವಾದ

ಪಾಂಡವರು ಅಜ್ಞಾತವಾಸ ಮುಗಿಸಿಕೊಂಡು ಬಂದು ದುರ್ಯೋಧನ ನಿಂದ ರಾಜ್ಯದ ಪಾಲು ಕೇಳಿದರು. ಆದಕ್ಕಾತನು ಒಪ್ಪಲಿಲ್ಲ. ಭೀಷ್ಮನು ಮೊದಲಿನಿಂದಲೂ ಅಂತರಂಗದಲ್ಲಿ ಪಾಂಡವರ ಹಿತಚಿಂತಕನು. ಈಗ ಪಾಂಡವರ ಪಾಲನ್ನು ದುರ್ಯೋಧನನು ಕೊಡಲು ಮನಸ್ಸು ಮಾಡದ್ದ ರಿಂದ ಭೀಷ್ಮನು ಮಧ್ಯಸ್ಥನಾಗಿ ದುರ್ಯೋಧನನಿಗೆ ತಿಳಿಹೇಳಿದನು. ದುರ್ಯೋ ಧನನು ಭೀಷ್ಮ, ದ್ರೋಣರಿಂದ ಕರ್ಣನೇ ತನಗೆ ಹೆಚ್ಚಿನವನೆಂದು ಯಾವಾ ಗಲೂ ಆಡುತ್ತಿದ್ದನು. ಈಗ ಭೀಷ್ಮನು ತಿಳಿಹೇಳಿದ ಮಾತಿಗೆ 'ಕರ್ಣನ ಹಾಗು ನನ್ನ ವಿಚಾರದಿಂದ ನಾನು ಹೇಳುವದಾದರೆ ಈ ಪಾಲು ಪಾಂಡವ ರಿಗೆ ಕೊಡಲಾರೆನು' ಎಂದು ಸ್ಪಷ್ಟ ಹೇಳಿದನು. ಆದರಿಂದ ಭೀಷ್ಮನು ಸಂತಾಪಗೊಂಡು 'ದುರ್ಯೋಧನ! ಈ ವಿಷಯದಲ್ಲಿ ಈ ಸೂತಾಧಮನ ವಿಚಾರವೇ! ಅವನು ನಿನಗೆ ಹೆಚ್ಚಿನವನೇ!' ಎಂದು ನುಡಿದನು. ಅಲ್ಲಿಯೇ ಕುಳಿತಿದ್ದ ಕರ್ಣನು ತನ್ನನ್ನು ಹೀಯಾಳಿಸಿ ನುಡಿದ ಭೀಷ್ಮನನ್ನು ಕಿಡಿಕಿಡಿ ಯಾಗಿ ನಿರೀಕ್ಷಿಸಿದನು. ದುರ್ಯೋಧನನು ತನ್ನನ್ನು ತಿರಸ್ಕರಿಸಿದ ಭೀಷ್ಮನಿಗೇ ನೊಂದೂ ಪ್ರತೀಕಾರ ಮಾಡಲಿಲ್ಲೆಂದು ಬಗೆದು "ರಾಜಾ! ದುರ್ಯೋಧನ! ಈ ಭೀಷ್ಮನು ಸಾಯುವ ವರೆಗೆ ನಾನು ಶಸ್ತ್ರಧರಿಸುವದಿಲ್ಲ" ಎಂದು ಒಮ್ಮೆಲೇ ನುಡಿದು ಬಿಟ್ಟನು. ಆಗ ಭೀಷ್ಮನು– "ಕರ್ಣಾ! ನನ್ನ ಜೀವಿತದಲ್ಲಿ ಮಾಡ ತಕ್ಕ ಕೆಲಸಗಳನ್ನೆಲ್ಲ ಮಾಡಿ ಮುಗಿಸಿರುವೆನು. ಇನ್ನು ನಾನು ಸತ್ತರೂ ಸರಿ, ಜೀವಿಸಿದ್ದರೂ ಸರಿ. ನೀನು ಮಾತ್ರ ಅರ್ಜುನನ ವಧೆಗೆಂದು ಅಹಮಹಮಿ ಕೆಯ ಪ್ರತಿಜ್ಞೆ ಮಾಡಿ ಈಗ ಶಸ್ತ್ರ ಧರಿಸುವದಿಲ್ಲೆಂದು ಹೇಡಿಗಳಿಗೆ ಉಚಿತ ನುಡಿಯನ್ನಾಡುವಿ. ಅಜ್ಞಾತವಾಸ ಮುಗಿಸಿ ಬಂದ ಅರ್ಜುನನೆದುರು ನಿಂತು ಯುದ್ಧಮಾಡು, ನಿನ್ನ ಪೌರುಷ ತೋರುವದು' ಎಂದು ಮತ್ತಿಷ್ಟು ಕೆರಳು

ವಂತೆ ನುಡಿದನು ಕರ್ಣನು ಭೀಷ್ಮನ ನುಡಿಗಳಿಂದ ಸಂತಪ್ತನಾಗಿ ವಾಗ್ಬಾಣಗಳನ್ನು ಬಿಡಹತ್ತಿದನು. ಅವರ ವಾದವಿವಾದಗಳು ವಿಕೋಪ ಸ್ಥಿತಿಯನ್ನು ಹೊಂದಿದವು. ಯಾರೂ ಹಿಂದೆ ಸರಿಯಲಿಲ್ಲ. ಕಡೆಗೆ ದುರ್ಯೋಧನನು ಅವರನ್ನು ತಡೆದು "ಕರ್ಣಾ! ಭೀಷ್ಮಾಚಾರ್ಯರೆ! ನಿಮ್ಮಿಬ್ಬರನ್ನೂ ನಾನು ಸಮತೆಯಿಂದ ಕಾಣುವೆನು. ಹೀಗೆ ನಿಮ್ಮ ವಾದವಿವಾದದಿಂದ ನಮ್ಮ ನಮ್ಮಲ್ಲಿಯೇ ಒಡಕುಂಟಾಗುವದು ನನಗೆ ಬೇಡಾಗಿದೆ. ಶಾಂತರಾಗಿರಿ" ಎಂದನು.

## ಕೃಷ್ಣ – ಕರ್ಣ – ಕುಂತಿಯರ ಭೆಟ್ಟಿ

ಪಾಂಡವರು ಅಜ್ಞಾತವಾಸದಿಂದ ಬಂದನಂತರ ಕೌರವ ಪಾಂಡವರಲ್ಲಿ ಸಖ್ಯತ್ವವನ್ನುಂಟು ಮಾಡುವ ಬಯಕೆಯಿಂದ ಕೃಷ್ಣನು ದುರ್ಯೋಧನನ ಬಳಿಗೆ ಹೋಗಿ ಆತನ ಮನವೊಲಿಸಲು ಯತ್ನಿಸಿ ವಿಫಲನಾದನು. ಶೂರ ಕರ್ಣನಸಹಾಯವೇ ಈವಿಫಲತೆಗೆ ಕಾರಣವೆಂದರಿತು ಕೃಷ್ಣನು ಕರ್ಣನ ಬಳಿಗೆ ಹೋದನು. ಅವನನ್ನು ಮನವಾರೆ ಹೊಗಳಿದನು. ಆತನಿಗೆ ಇದು ವರೆಗೆ ಅವಗತವಿರದ ಅವನ ಜನನವೃತ್ತವನ್ನು ತಿಳಿಸಿದನು. ಕೌರವ–ಪಾಂಡವರಿಗೆ ನೀನೇ ಹಿರಿಯಣ್ಣನೆಂದು ಆತನಲ್ಲಿ ನಂಬುಗೆಯನ್ನು ಹುಟ್ಟಿಸಿದನು. 'ದೇವಾ! ನೀನುಹೇಳಿದ್ದೆಲ್ಲವನ್ನೂ ಒಪ್ಪುವೆನು. ಆದರೆ ನನಗೆ ಸರಿದೋರಿದರೂ ಕೂಡ ನಿನ್ನ ಕೆಲವು ಮಾತುಗಳನ್ನು ಕೇವಲ ಕೌರವನ ಹಿತದ ದೃಷ್ಟಿಯಿಂದ ಅಲ್ಲಗಳೆಯಬೇಕಾಯಿತು; ಕ್ಷಮೆಯಿರಲಿ' ಎಂದು ಕರ್ಣನುಹೇಳಿದನು. ಬಂದ ಹಾದಿಗೆ ಸುಂಕವಿಲ್ಲೆಂಬಂತೆ ಕೃಷ್ಣನು ಹಾಗೇ ತಿರುಗಿದನು.

ಕೃಷ್ಣನು ಕರ್ಣನಲ್ಲಿ ತನ್ನ ಭೇದ ನೀತಿಯಆಟ ನಡೆಯದ್ದಕ್ಕೆ ಅವನು ಮತ್ತೂ ಒಂದು ಯೋಚನೆ ಮಾಡಿ ಕುಂತಿಯನ್ನು ಕರ್ಣನ ಕಡೆಗೆ ಕಳಿಸಿದನು. ಕುಂತಿಯು ತನ್ನ ಕೌಮಾರ್ಯಾವಸ್ಥೆಯಲ್ಲಿ ಜನಿಸಿದ ಮಗನ ಬಳಿ ಬಂದಳು. ಆತನಿಗೆ ಪೂರ್ವದ ಸಂಗತಿಯನ್ನೆಲ್ಲ ಹೇಳಹತ್ತಿದಳು. ಕರ್ಣನು ಸಾಕ್ಷಾತ್ ತಾಯಿಯ ದರ್ಶನದಿಂದ ಒಳ್ಳೇ ಹರುಷಗೊಂಡನು. ಆಕೆ ಹೇಳಿದ ಹಲವು ಆದೇಶಗಳಲ್ಲಿ ಕೆಲವನ್ನು ಮಾತ್ರ ಅವಳಿಗೆ ವಚನವಿತ್ತು ಪಾಲಿಸುವೆನೆಂದು ತಿಳಿಸಿದನು. 'ನಿನ್ನ ಮಕ್ಕಳನ್ನು ಕೊಲ್ಲಲಾರೆ, ತೊಟ್ಟ ಬಾಣ ಮತ್ತೆ ತೊಡಲಾರೆ' ಎಂಬವೇ ಕುಂತಿಗೆ ಆತನು ಕೊಟ್ಟ ವಚನಗಳಲ್ಲದೆ "ದಾತಾರನಾದ ಕೌರವನಿಗೆ ನಾನು ಎರಡು ಬಗೆಯಲಾರೆ" ಎಂಬ ತನ್ನ ನಿರ್ಧಾರವನ್ನೂ ತಿಳಿಸಿ ಆಕೆಯನ್ನು ವಂದಿಸಿ ಕಳಿಸಿದನು.

ರೇನು? ಅದನ್ನು ಕೇಳಿದವರೆಲ್ಲ ಕರ್ಣನಿಗೆ ಧಿಕ್ಕಾರವೆಂದು ನುಡಿಯದಿರಲಿಲ್ಲ. ಬಾಲಕನಾದರೂ ಅಭಿಮನ್ಯುವು ಕರ್ಣ ಹಾಗು ಕರ್ಣನ ಜೊತೆಗಾರ ವೀರರನ್ನು ತನ್ನ ಬಾಣಗಳಿಂದ ಮುಚ್ಚಿಬಿಟ್ಟನು. ತನ್ನ ಮೇಲೆ ಬರುವ ಬಾಣಗಳನ್ನು ತುಂಡರಿಸಿದನು. ಅವನ ಹೊಡೆತದಿಂದ ಕರ್ಣನು ಕೆಲಕಾಲ ದಿಗ್ಭ್ರಾಂತನಾಗಿ ಜರ್ಜರಿತನಾದನು. ಅಭಿಮನ್ಯುವಿನ ಒಂದು ಬಾಣದಿಂದ ಕರ್ಣನ ಧ್ವಜಪತಾಕೆಯೇ ಹಾರಿ ಮುರಿಯಿತು, ಬಿಲ್ಲು ಕೆಳ ಬಿದ್ದಿತು. ಇನ್ನೊಂದು ಹೊಡೆತದಿಂದ ಕರ್ಣನು ಮೂರ್ಛಿತನಾಗಿ ಬಿದ್ದು ಪಾಂಡವರ ಸೈನ್ಯಕ್ಕೆ ಹರ್ಷವನ್ನುಂಟು ಮಾಡಿದನು. ಮುಂದೆ ಅಭಿಮನ್ಯುವು ಮೋಸಗಾರಿಕೆಯಿಂದ ರಣದಲ್ಲಿ ಬಿದ್ದು ಮಡಿದನು. ಅಭಿಮನ್ಯುವನ್ನು ಮೋಸದಿಂದ ಕೊಂದರೆಂಬುದನ್ನು ತಿಳಿದು ಅರ್ಜುನನು ಅಲ್ಲಿಗೆ ಬಂದನು. ಮತ್ತು ಕರ್ಣನನ್ನುದ್ದೇಶಿಸಿ 'ಎಲೈ ಆತ್ಮಶ್ಲಾಘಿಯೇ ! ಅಧರ್ಮ ಬುದ್ಧಿಯೇ ! ಶೂರರಿಗೆ ಜಯಾಪಜಯಗಳೆರಡರಲ್ಲೊಂದು ಇದ್ದೇ ಇರುವದು. ಹಾಗು ಅವು ಅನಿತ್ಯವಾದವು. ಸಾಕ್ಷಾತ್ ಇಂದ್ರನೂ ಕೂಡ ಕಾಳಗಕ್ಕೆ ನಿಂತರೆ ಅವನು ಒಮ್ಮೆ ಜಯಪಡೆಯಬಹುದು. ಒಮ್ಮೆ ಅಪಜಯ ಹೊಂದಬಹುದು. ನಾನೇ ನಿನ್ನನ್ನು ವಧೆಮಾಡುವ ಪ್ರತಿಜ್ಞೆಮಾಡಿದ್ದರಿಂದ ಭೀಮನು ನಿನ್ನನ್ನು ಕೊಲ್ಲಲಿಲ್ಲ. ಆತನಿಗೆ ನೀನು ದುರುಕ್ತಿಗಳನ್ನಾಡಿ ಧರ್ಮಬಾಹಿರನಾದಿ. ನಿಜವಾದ ಶೂರನು ವೈರಿಗಳನ್ನು ಗೆದ್ದರೂ ಕೂಡ ಅವರನ್ನು ಆತನು ಎಂದೂ ಹಿಂಸಿಸುವದಿಲ್ಲ. ನೀನು ನಾನಿಲ್ಲದ ಸಮಯ ಸಾಧಿಸಿ :ಬಾಲಕ ಅಭಿಮನ್ಯುವನ್ನು ವಧೆಮಾಡಿದಿ. ಇನ್ನು ನಿನ್ನ ಜೀವಿತದ ಆಸೆಯನ್ನು ಬಿಟ್ಟು ಬಿಡು. ಯುದ್ಧಕ್ಕೆ ಸನ್ನದ್ಧನಾಗು. ನಾನಿಲ್ಲದಾಗ ನೀನು ನನ್ನ ಮಗನನ್ನು ಕೊಂದರೆ ನಾನುನಿನ್ನೆದುರಿನಲ್ಲಿಯೇ ನಿನ್ನಮಗ ವೃಷಸೇನನನ್ನು ಕೊಲ್ಲುವೆನು ಎಚ್ಚರಿಕೆ' ಎಂದು ನುಡಿದನು.

ಕೌರವರಕಡೆಯ ಅದೆಷ್ಟೋ ವೀರರು ಇಷ್ಟರಲ್ಲಿ ಮಡಿದುಹೋಗಿದ್ದರು. ಕರ್ಣನುಸೇನಾಪತಿಯ ಪಟ್ಟಸ್ವೀಕರಿಸಿದ್ದನು. ಕೇವಲ ಕೈಬೆರಳಿನಿಂದ ಎಣಿಸುವಷ್ಟು ಶೂರರು ಮಾತ್ರ ಉಳಿದಿದ್ದರು. ಅವರಲ್ಲಿ ಮುಖ್ಯರಾದವರೆಂದರೆ ಅಶ್ವತ್ಥಾಮ, ಶಲ್ಯ, ಸುಬಲ, ಶಾರದ್ವತ, ಕೇಕಯರಾಜಪುತ್ರ, ದುರ್ಯೋಧನ, ಸುಷೇಣ, ಸತ್ಯಸೇನ, ಚಿತ್ರಾಂಗದ, ಚಿತ್ರವರ್ಮ, ಕರ್ಣಪುತ್ರ ಮುಂತಾದವರು. ಕರ್ಣನು ಇವರ ಹಾಗೂ ಉಳಿದ ಶೂರರ ಸಹಾಯದಿಂದ

## ಕರ್ಣನ ಕಾಳಗಗಳು

ದ್ರೋಣ ಸೇನಾಪತಿಯು ತನ್ನ ಎಲ್ಲ ಯೋಧರನ್ನು ಕಲೆ ಹಾಕಿ ಪಾಂಡವರ ಭಯದಿಂದ ಹಿಂದೆಗೆಯುವ ಕುರಿತು ಸುಪರ್ಣ ವ್ಯೂಹವನ್ನು ರಚಿಸಿದನು. ಈ ಭಯಂಕರ ವ್ಯೂಹದೆದುರು ಪಾಂಚಾಲ-ಪಾಂಡವ-ಮತ್ಸ್ಯ ರಾಜರಿಗೆ ನಿಲ್ಲಲು ಎಂದೂ ಧೈರ್ಯವಾಗುವಂತಿರಲಿಲ್ಲ. ದುರ್ಯೋಧನನು ದ್ರೋಣ ಸೇನಾಪತಿಯ ಕುಶಲತೆಯನ್ನು ಕರ್ಣನ ಮುಂದೆ ಚನ್ನಾಗಿ ಹೊಗಳ ಹತ್ತಿದನು. ಹಾಗು ಆತನು ಕರ್ಣನಿಗೆ 'ಕರ್ಣಾ ಇನ್ನು ಪಾಂಡವರು ಪೂರ್ಣ ಜರ್ಜರಿತರಾಗುವರೆಂದು ಭಾವಿಸು' ಎಂದನು. ಕರ್ಣನು 'ರಾಜಾ! ಪಾಂಡವರು ಗತಬಲರಾಗಿರುವರೆಂದು ನಾನು ನಂಬುವದಿಲ್ಲ. ಅವರಲ್ಲಿಯು ಒಬ್ಬನೇ ಭೀಮನಿಂದ ಅತಿರಥ-ಮಹಾರಥಿಗಳು ನಿರ್ನಾಮವಾಗುವರು. ಅಷ್ಟರಿಂದ ದುರ್ಯೋಧನ! ಆ ವೈರಿ ಪಾಂಡವರ ಬಗೆಗೆ ಅಲಕ್ಷ್ಯ ಪಡುವದು ಇಷ್ಟವಲ್ಲ. ಈಗ ಅವರು ದ್ರೋಣಾಚಾರ್ಯರ ಸಮಾಚಾರ ತೆಗೆದುಕೊಳ್ಳ ಹತ್ತಿರುವರು ನಡೆಯಿರಿ. ಶೀಘ್ರವೇ ಅವರ ಸಹಾಯಕ್ಕಾಗಿ ಹೋಗೋಣ' ಎಂದು ನುಡಿದನು. ಕೂಡಲೇ ಅವರು ಸುಪರ್ಣವ್ಯೂಹಕ್ಕೆ ಬಂದರು' ದ್ರೋಣನು ಯುಧಿಷ್ಠಿರ ಧರ್ಮನನ್ನು ಬಂಧಿಸುವ ಪ್ರತಿಜ್ಞೆ ಮಾಡಿ ವಿಫಲನಾಗಿದ್ದನು. ಅದನ್ನು ಕಂಡು ದುರ್ಯೋಧನನು ಸಂತಾಪಗೊಂಡನು. ಆಗಲೇ ಅವನ ಅಪ್ಪಣೆಯಿಂದ ಆ ದ್ರೋಣವಿರಚಿತ ಸುಪರ್ಣವ್ಯೂಹವನ್ನು ಮುರಿದು ಚಕ್ರವ್ಯೂಹವನ್ನು ರಚಿಸಲಾಯಿತು.

ಕೌರವ ಸೇನೆಯ ಚಕ್ರವ್ಯೂಹವು ಅಭೇದ್ಯವಾಗಿದ್ದಿತು. ಅದನ್ನು ಭೇದಿಸುವ ವೀರನ. ಅರ್ಜುನನ ಹೊರತು ಇನ್ನಾರಿರಲಿಲ್ಲ. ಅಂದು ಅರ್ಜುನನು ಬೇರೆ ಯುದ್ಧದಲ್ಲಿ ತೊಡಗಿದ್ದುದರಿಂದ ಅವನ ಮಗ ಅಭಿಮನ್ಯು ಎಂಬ ಬಾಲಕನೇ ಆ ಚಕ್ರವ್ಯೂಹವನ್ನು ಸೇರಿದನು. ಎಡಬಲದ ಕೌರವ ಸೇನೆಯನ್ನು ತುಂಡರಿಸುತ್ತ ವ್ಯೂಹ ಮಧ್ಯದಲ್ಲಿ ಸೇರಿ ಸಿಕ್ಕನು. ಆಗ ಕೌರವನ ಕಡೆಯ ವೀರಾಧಿವೀರರೆಂಬವರೆಲ್ಲರೂ ಆ ಬಾಲಕನ ಮೇಲೆ ಕೈ ಮಾಡುವ ನಿಂದ್ಯ ಯುದ್ಧ ಮಾಡಿದರು. ಶೂರ-ವೀರನೆನ್ನಿಸುವ ಕರ್ಣನು ಆ ಕಂದನ ಮೇಲೆ ತನ್ನಲ್ಲಿಯ ಮೇಲ್ತರದ ಶಸ್ತ್ರಾಸ್ತ್ರಗಳನ್ನು ಚೆಲ್ಲಿ ತನ್ನ ನೀಚತನ ಪ್ರಕಟಿಸಿದನು. ಹದಿನಾರು ವರುಷದ ಬಾಲಕನೆಂದರೇನು? ಅವನ ಮೇಲೆ ಖ್ಯಾತಿವಂತನೂ ಪರಶುರಾಮನ ಶಿಷ್ಯನೂ ಆದ ಶೂರ ಕರ್ಣನ ಬಾಣಗಳಿಂದ

ಮಕರಾಕಾರವಾದ ವ್ಯೂಹ ರಚಿಸಿದನು. ಆ ಮಕರ(ಮೊಸಳೆ)ದ ಮುಖವೆಂದು ಕರ್ಣನು ತಾನೇ ನಿಂತನು; ಶಕುನಿ ಹಾಗು ಉಲೂಕರನ್ನು ಆ ಮೊಸಳೆಯ ಕಣ್ಣುಗಳೆಂದು ನಿಲ್ಲಿಸಿದನು. ಆ ಮಕರವ್ಯೂಹದ ಶಿರೋಭಾಗದಲ್ಲಿ ಅಶ್ವತ್ಥಾಮನನ್ನು ಸ್ಥಿರಗೊಳಿಸಿದನು. ಮುಖದ ಎರಡೂ ನಿಟ್ಟಿನ ರಕ್ಷಣೆಯ ಭಾರವು ಕೌರವರದಾಗಿ ಗೊತ್ತಾಯಿತು. ಅವರ ನಡುವಿನಲ್ಲಿ ದುರ್ಯೋಧನನು ಸೈನ್ಯಸಹಿತ ನಿಂತನು. ಕೃತವರ್ಮನು ಎಡದ ಕಾಲಾಗಿಯೂ ಶಾರದ್ವತನು ಬಲದಕಾಲಾಗಿಯೂ ಗೊತ್ತುಮಾಡಲ್ಪಟ್ಟರು. ಇವರಲ್ಲದೆ ಶಲ್ಯ, ಚಿತ್ರ, ಚಿತ್ರಸೇನ, ಸುಷೇಣ, ಸತ್ಯಸೇನ, ಇವರೆಲ್ಲರು ಆ ಮೊಸಳೆಯ ಆಸನ, ಬಾಲ, ಎರಡೂ ಮಗ್ಗಲಿನ ಚಕ್ರರಕ್ಷಕರೆಂದು ನಿಯಮಿಸಲ್ಪಟ್ಟರು. ಇಂತು ಕೌರವಸೈನ್ಯವು ಮಕರಾಕಾರವ್ಯೂಹವಾಗಿ ಕರ್ಣನಿಂದ ರಚಿಸಲ್ಪಟ್ಟಿತು.

ಕರ್ಣನು ರಚಿಸಿದ ಮಕರಾಕಾರ ವ್ಯೂಹವನ್ನು ಧರ್ಮರಾಜನು ನಿರೀಕ್ಷಿಸಿ ಅರ್ಜುನನಿಗೆ:—'ಅರ್ಜುನ! ಕೌರವ ಸೈನ್ಯವು ಬಹಳೇ ಕಡಿಮೆಯಾದಂತೆ ಈ ವ್ಯೂಹದಿಂದ ವ್ಯಕ್ತವಾಗುವದು. ನನಗಂತೂ ನಮ್ಮ ಸೇನಾಬಲದಮುಂದೆ ಆ ಕೌರವ ಸೈನ್ಯವು ಹುಲ್ಲುಕಡ್ಡಿಗಿಂತ ಕಡಿಮೆಯಾಗಿ ಕಾಣುವದು. ಆದುದರಿಂದ ಅರ್ಜುನ ನೀನು ಉಭಯತರ ಬಲಾಬಲ ತಿಳಿದು ಯುದ್ಧಮಾಡಿ ಆ ಕರ್ಣನನ್ನು ಕೊಂದುಬಿಡು' ಎಂದನು.

ಅಣ್ಣನ ಅಪ್ಪಣೆಯಂತೆ ಅರ್ಜುನನು 'ಅರ್ಧಚಂದ್ರಾಕಾರ ವ್ಯೂಹವನ್ನು ರಚಿಸಿದನು. ಅದರಲ್ಲಿ ಭೀಮ, ಧೃಷ್ಟದ್ಯುಮ್ನ, ಅರ್ಜುನ, ನಕುಲ–ಸಹದೇವ ಧರ್ಮರಾಜರು ಅರ್ಧ ಚಂದ್ರನ ಒಂದೊಂದು ಭಾಗದಲ್ಲಿ ಸಸೈನ್ಯವಾಗಿ ನಿಂತುಕೊಂಡರು.

ಕರ್ಣನು ವ್ಯೂಹರಚಿಸಿಕೊಂಡು ಕೂಡಲೆ ಸಮರಕ್ಕೆ ಉದ್ಯೋಗಿಸಿದನು. ಮೊದಲಿಗೆ ಆತನು 'ಯಮರಾಷ್ಟ್ರವಿವರ್ಧನ' ಎಂಬ ಅಸ್ತ್ರಸಂಗ್ರಾಮವನ್ನು ಆರಂಭಿಸಿ ಪಾಂಡವಸೈನ್ಯದಲ್ಲಿಯ ನಕುಲನೊಡನೆ ಯುದ್ಧವೆಸಗಿದನು. ಕರ್ಣನ ರಭಸಕ್ಕೆ ನಕುಲನು ಕೈಯಲ್ಲಿಯ ಶಸ್ತ್ರ ಕಳೆದುಕೊಂಡು ಓಡಿದನು. ಕರ್ಣನು ಬೆನ್ನಟ್ಟಿ ಹೋಗಿ ಹಿಡಿದು ಅವನನ್ನು ತನ್ನ ಹೀನೋಕ್ತಿಗಳಿಂದ ಹೀಯಾಳಿಸಿಬಿಟ್ಟನು. ಆಗಿನ ಪ್ರಸಂಗದಲ್ಲಿ ಕರ್ಣನು ನಕುಲನನ್ನು ಕೊಲ್ಲಬಹುದಾಗಿತ್ತು. ಆದರೆ ತಾನು ಕುಂತಿಗೆ ವಚನ ಕೊಟ್ಟಿದ್ದದನ್ನು ಸ್ಮರಿಸಿ ಸಜೀವವಾಗಿ ಬಿಟ್ಟನು.

ಬಳಿಕ ಕರ್ಣನು ಧೃಷ್ಟದ್ಯುಮ್ನನನ್ನು ಕೆಣಕಿದನು. ಅವನ ಧ್ವಜ ಕಸಿದುಕೊಂಡು ಓಡಿಸಿಬಿಟ್ಟನು.

ಪಾಂಚಾಲನ ತರುವಾಯ ಕರ್ಣನು ಶಿಖಂಡಿಯ ಸಮಾಚಾರ ತೆಗೆದು ಕೊಂಡನು. ಅವನೂ ಆಗಲೇ ಓಡಿಹೋದನು.

ಮುಂದೆ ಧರ್ಮ-ದುರ್ಯೋಧನರ ಯುದ್ಧ ನಡೆದು ದುರ್ಯೋಧನನು ಮೂರ್ಛಿತನಾಗಿ ಬಿದ್ದನು. ಆಗ ಭೀಮನು ಅಲ್ಲಿಗೆ ಬಂದು ಧರ್ಮರಾಯನಿಗೆ 'ಅಣ್ಣಾ ಇವನು ನನ್ನ ಕೈಯಿಂದ ಸಾಯಬೇಕಾಗಿದೆ. ನೀವು ಬಿಟ್ಟುಬಿಡಿರಿ' ಎಂದು ಹೇಳಿ ಬಿಡಿಸಿದನು. ಈ ಬಗೆಯಾಗಿ ಕೌರವರ ಅಪಜಯದಿಂದ ಕರ್ಣನು ತಾನು ಸಾತ್ಯಕಿಯೊಡನೆ ನಡೆಯಿಸಿದ ಯುದ್ಧನಿಲ್ಲಿಸಿ ಅರ್ಜುನನ ಮೇಲೇರಿ ಹೋದನು. ಮೊದಲಿಗೆ ಇಬ್ಬರಲ್ಲಿಯೂ ಬಾಣಗಳ ಚಿಕ್ಕಪುಟ್ಟ ಪ್ರಹಾರಗಳಾದವು. ಇಬ್ಬರೂ ಸಮಬಲದಿಂದ ಕಾದಹತ್ತಿದರು. ಕೆಲ ಹೊತ್ತಿನಮೇಲೆ ಕೌರವರ ಬಲವು ಕಡಿಮೆಯಾಯಿತು. ಎಷ್ಟೋ ಸೈನ್ಯವು ಸತ್ತಿತು; ಎಷ್ಟೋ ಸೈನ್ಯವು ಓಡಿಹೋಯಿತು. ಇಷ್ಟರಲ್ಲಿ ಅಂದಿನ ಯುದ್ಧ ಮುಗಿಯಿತು. ಎರಡೂ ಪಕ್ಷದವರು ತಮ್ಮ ತಮ್ಮ ಶಿಬಿರ ಸೇರಿದರು.

## ಕರ್ಣನ ಕೊನೆಯ ಕಾಳಗ

ಮರುದಿನ ರವಿಯುದಯವಾಗುವ ಮೊದಲೇ ಎರಡೂ ನಿಟ್ಟಿನವರು ಸಜ್ಜಾಗಿ ಕಾಳಗದ ಕಣಕ್ಕೆ ಬಂದಿಳಿದರು. ಕರ್ಣನು ರಣಭೂಮಿಗೆ ರಥ ದಿಂದ ಬರುವಷ್ಟರಲ್ಲಿ ಹಲವು ಅಪಸೂಚನೆಗಳಾದವು. ಅವನ ರಥದ ಕುದುರೆ ಗಳು ಬರಬರುತ್ತ ಹಾದಿಯಲ್ಲಿ ಕುಕ್ಕರಿಸಿಬಿದ್ದವು; ಆಕಾಶದಿಂದ ಎಲುವಿನ ಮಳೆ ಸುರಿಯಿತು; ಸೈನ್ಯದಲ್ಲಿಯ ಕುದುರೆಗಳೆಲ್ಲ ಅಳಹತ್ತಿದವು. ಇದಾವ ದನ್ನೂ ಲೆಕ್ಕಿಸದೆ ಕರ್ಣನು ಬರುತ್ತಿರುವಾಗ ಅವನ ಹಿಂದುಗಡೆಯ ರಥ ದಲ್ಲಿದ್ದ ದುರ್ಯೋಧನನು 'ಇಂದಿನ ಯುದ್ಧದಲ್ಲಿ ಗೆಲ್ಲುವೆವು. ಇಲ್ಲವೆ ಸಾಯು ವೆವು' ಎಂದೊದರುತ್ತ ಬರುತ್ತಿದ್ದನು. ಕರ್ಣನೂ ರಣಭೂಮಿಗೆ ಬರುವ ಮೊದಲು ತನ್ನ ಸಾರಥ್ಯವನ್ನು ವಹಿಸಿದ ಶಲ್ಯನಿಗೆ ಇದೇ ಪಲ್ಲವಿಯನ್ನು ಬೇರೆ ಬಗೆಯಿಂದ ಆಡಿದ್ದನು. ಅವನು ಶಲ್ಯನಿಗೆ–'ಇಂದು ಯುದ್ಧದಲ್ಲಿ ಅರ್ಜುನನು ಸಾಯಬೇಕು. ಇಲ್ಲವೆ ನಾನು ಯಮಸದನ ಸೇರಬೇಕು.

ಇದಿಷ್ಟೇ ಕೆಲಸವಾಗುವದಿದೆ' ಎಂದನು. ಕರ್ಣನ ಪೌರುಷದ ನುಡಿಗಳನ್ನು ಕೇಳಿ ಶಲ್ಯನು–ನಿನ್ನ ಸಾವು ಸಮೀಪಿಸಿದ್ದುದರಿಂದಲೇ ನಿನ್ನಲ್ಲಿ ಅರ್ಜುನನೊಡನೆ ಯುದ್ಧ ಮಾಡುವ ಬುದ್ಧಿಯುಂಟಾಗಿದೆ ಎಂದು ಎರಡು ಮೂರು ಸಾರೆ ಕರ್ಣನಿಗೆ ನಿಬ್ಬರದ ದನಿಯಿಂದ ಹೇಳಿದನು. ಕರ್ಣನು– 'ಶಲ್ಯನೆ! ಇದರ ಅನುಭವವು ಇಂದು ನಿನಗೆ ಪ್ರತ್ಯಕ್ಷತೋರುವದು. ನಡೆ, ರಥದ ಕುದುರೆಗಳನ್ನು ಚಪ್ಪರಿಸು' ಎಂದನು. ಕರ್ಣನ ಹೇಳಿಕೆಯಂತೆ ಶಲ್ಯನು ರಥವನ್ನು ಸಾಗಿಸಹತ್ತಿ 'ಹಂಸ ಕಾಗೆಗಳ' ಬಗೆಗಿರುವ ಒಂದು ಕಥೆಯನ್ನು ಹೇಳುತ್ತ ನಡೆದನು. ನಡುನಡುವೆ ಕರ್ಣನು ತನ್ನ ಶೂರತನದ ಪ್ರಶಂಸೆ ಮಾಡಿಕೊಳ್ಳುವನು, ಅದಕ್ಕೆ ಪ್ರತಿಯಾಗಿ ಶಲ್ಯನು ಮತ್ತೆ ಅವನನ್ನು ಹೀಯಾಳಿಸುವ ನುಡಿಯನ್ನಾಡುವನು. ಹೀಗೆ ಅವರೀರ್ವರಲ್ಲಿ ಸ್ನೇಹತ್ವದಿಂದ ಆರಂಭವಾಗಿದ್ದ ವಾದ ವಿವಾದವು ವಿಕೋಪಕ್ಕೆ ಮುಟ್ಟಿತು. ಅನ್ಯೋನ್ಯರು ಕೆಂಡಕಾರ ಹತ್ತಿದರು. ಹಿಂದಿನ ರಥದಲ್ಲಿದ್ದ ದುರ್ಯೋಧನನು ಬಂದು ಅವರ ವಿತುಷ್ಟತೆಯನ್ನು ದೂರ ಮಾಡಿದನು. ಈ ಬಗೆಯಾಗಿ ಶಲ್ಯ–ಕರ್ಣರ ಪ್ರಸಂಗ ನಡೆದಾಗಲೇ ರಥವು ಕಾಳಗದ ಕಣವನ್ನು ಮುಟ್ಟಿತು.

ಕರ್ಣನು ರಣಭೂಮಿಯಲ್ಲಿ ಬಂದಕೂಡಲೆ ಕರ್ಣನೇ ಮೊದಲು ಪಾಂಡವರ ಪಕ್ಷದ ವೀರರನ್ನು ಸದೆಯಹತ್ತಿ ರಣದ ಉಗ್ರತೆಗೆ ಹೆಚ್ಚು ಕಳೆಯನ್ನು ಉಂಟು ಮಾಡಿದನು. ಯುಧಿಷ್ಠಿರನನ್ನು ಅಸ್ತ್ರದಿಂದ ಗಾಯಗೊಳಿಸುವ ಪ್ರಯತ್ನ ಮಾಡಿದನು. ಪ್ರತಿಯಾಗಿ ಯುಧಿಷ್ಠಿರನು ತನ್ನಯಮದಂಡ ಬಾಣದಿಂದ ಕರ್ಣನನ್ನು ಸದೆದನು. ಅದು ಕರ್ಣನ ಬಲದ ಕೊಕ್ಕೆಯಲ್ಲಿ ಸೇರಿ ಆತನು ಮೂರ್ಛಿತನಾದನು. ಕೌರವ ಸೇನೆಯಲ್ಲಿ ಹಾಹಾಕಾರ ನಡೆಯಿತು. ಪಾಂಡವ ಸೇನೆಯಲ್ಲಿ ಸಿಂಹನಾದ ಗರ್ಜನೆಯು ಸುರುವಾಯಿತು. ತುಸು ಹೊತ್ತಿನಲ್ಲಿ ಕರ್ಣನು ಮೂರ್ಛೆ ತಿಳಿದೆದ್ದು ಮತ್ತೆ ಅದೇ ಕ್ರಮ ನಡೆಸಿದನು. ಅದೇ ಹೊತ್ತಿಗೆ ಪಾಂಡವರ ಕಡೆಯ ವೀರರು ಬಂದು ಕರ್ಣನ ಮೇಲೆ ಬಾಣ ಸುರಿಸಹತ್ತಿದರು. ಕರ್ಣನು ಅವನ್ನೆಲ್ಲ ಶಾಂತರೀತಿಯಿಂದ ನಿವಾರಿಸಿಕೊಳ್ಳುತ್ತಿದ್ದನು. ಈ ಬಗೆಯಾಗಿ ಧರ್ಮ ಕರ್ಣರ ಯುದ್ಧವು ಯಾವದೊಂದು ನಿರ್ಣಯ ಕಾಣದೆ ಇರುವಾಗ ಭೀಮನು ಮುಂದುವರಿದು ಬಂದು ಕರ್ಣನೆದುರು ನಿಂತು ಯುದ್ಧಕ್ಕೆ ಆಹ್ವಾನಿಸಿದನು. ಮತ್ತು ಆತನು ಕರ್ಣನಿಗೆ–

"ನೀನು ನನ್ನನ್ನು ಸೋಲಿಸಿದರೆ ಮಾತ್ರ ಅರ್ಜುನನನ್ನು ನಿಶ್ಚಯವಾಗಿ ಸೋಲಿಸುವಿ" ಎಂದನು. ಆಗ ಕರ್ಣನು ಶಲ್ಯನಿಗೆ- "ಈ ಭೀಮನ ಮೇಲೆ ನನ್ನ ರಥವನ್ನು ಹಾಯಿಸು" ಎಂದ ಕೂಡಲೆ ಅವರೀರ್ವರ ಯುದ್ಧಾರಂಭವಾಯಿತು.

ಮೊದಲು ಕರ್ಣನು ಭೀಮನನ್ನು ಬಾಣಗಳಿಂದ ಬೆದರಿಸಿದನು. ಭೀಮನು ಉಗ್ರರೂಪದಿಂದ ಮುಂವರಿದು ಬಂದು ಕರ್ಣನನ್ನು ರಥದಲ್ಲಿಂದ ಕೆಳಗೆಳೆದು ಕುಳ್ಳಿರಿಸಿದನು. ಆಗ ಕರ್ಣನು ಅಸಹಾಯನಾದುದನ್ನು ಕಂಡು ದುರ್ಯೋಧನನು ಅವನ ಸಹಾಯಕ್ಕೆ ಕೃಪ, ಅಶ್ವತ್ಥಾಮರನ್ನು ಕಳಿಸಿದನು. ಬಳಿಕ ರಣಸ್ವರೂಪವು ಭಯಂಕರವಾಯಿತು. ಕರ್ಣನು ಭೀಮನನ್ನು ಜರ್ಜರಿತನನ್ನಾಗಿ ಮಾಡಿದ ಕೂಡಲೆ ಕೃಷ್ಣನು ಅರ್ಜುನನನ್ನು ಕುರಿತು– "ಅರ್ಜುನಾ ವೈರಿ ಸಾಮರ್ಥ್ಯ ಹೆಚ್ಚಾಯಿತು. ನೀನು ಎಚ್ಚರಗೊಳ್ಳು. ಪ್ರತೀಕಾರ ನಡೆಯಿಸು' ಎಂದು ಸೂಚಿಸಿದನು. ಕೂಡಲೆ ಅರ್ಜುನ ಕರ್ಣರ ಯುದ್ಧ ಸುರುವಾಯಿತು. ಪಕ್ಷ ಪ್ರತಿಪಕ್ಷಗಳ ವೀರರು ಪರಸ್ಪರವಾಗಿ ಹೋರಾಟ ನಡಿಸಿದರು. ಕೇವಲ ಕರ್ಣ ಹಾಗು ಅವನ ವಿರುದ್ಧ ಅರ್ಜುನ, ಇವರೀರ್ವರಲ್ಲಿ ಮಾತಿಗೆ ಮಾತು, ಕೈಗೆ ಕೈ ಹತ್ತಿ ರಣದಲ್ಲಿಯ ಯುದ್ಧ ರಸವು ಸೋರಿ ನಾಶವಾಗಲು ಸುರುವಾಯಿತು. ನಡುನಡುವೆ ಕರ್ಣನಿಗೆ ದುರ್ಯೋಧನನು ಹುರುಪು ಕೊಡುವನು. ಅರ್ಜುನನಿಗೆ ಕೃಷ್ಣನು ಸಲಹೆ ಕೊಡುವನು. ಕರ್ಣನು ಅಗ್ನಿಯಂತೆ ತೇಜಸ್ವಿ, ವಾಯುವಿನಂತೆ ಬಲಿಷ್ಠ, ಯಮನಂತೆ ಕೋಪಿಷ್ಠ ಇಂಥವನನ್ನು ಎದುರಿಸಲು ಅವನಿಗಿಂತ ಹೆಚ್ಚಿನ ತೇಜ, ಬಲ, ಸಿಟ್ಟು ಸಳುಳ್ಳವನೇ ಅವಶ್ಯವೆಂಪರಿತು ಶ್ರೀಕೃಷ್ಣನು ತನ್ನ ಬೋಧೆ ಸಲಹೆಯಿಂದ ಆಗಾಗ್ಗೆ ಅರ್ಜುನನನ್ನು ಎಚ್ಚರಿಸಿ ಸಿದ್ಧಪಡಿಸಿದನು. ಕೌರವರಿಂದ ಪೂರ್ವದಿಂದಲೂ ಪಾಂಡವರ ನಾಶಕ್ಕಾಗಿ ನಡೆದ ಕ್ರಿಯೆಗಳನ್ನೆಲ್ಲ ಅವನ ಸ್ಮರಣೆಗೆ ತಂದು ಕೊಟ್ಟು ಅವನನ್ನು ಕೆರಳಿದ ಸಿಂಹಕ್ಕೆ ಸರಿ ಮಾಡಿಬಿಟ್ಟನು. ಆದರಿಂದ ಅರ್ಜುನನು ರಣಮಾರಿಯನ್ನೊಲಿಸಿಕೊಂಡು ಕರ್ಣನಿಗೆ ಕೊನೆಯನ್ನುಂಟು ಮಾಡುವ ಯುದ್ಧ ಹೂಡಿದನು. ಕರ್ಣನು ನೋಡನೋಡುತ್ತಿರು ಆತನ ಮಗ ವೃಷಸೇನನ ವಧೆಯು ಅರ್ಜುನನಿಂದಾಯಿತು. ಇದರಿಂದಂತೂ ಕರ್ಣನ ಹೃದಯವು ಪುತ್ರಶೋಕವೆಂಬ ಕಿತ್ತಲಾರದ ಬಾಣದಿಂದ ವ್ಯಥೆ ಪಡಹತ್ತಿತು.





[illegible]ತ್ತಿಗೆ ಭೀಮನ ಲವಲವಿಕೆ, ಕೃಷ್ಣನ ಆತುರತೆ ಇವು ಅರ್ಜುನನನ್ನು ಕರ್ಣವಧೆಯ ತೀವ್ರತೆಗೆ ಸಿದ್ಧ ಮಾಡಿದವು. ಹುರುಪಿನಿಂದ ಹೊಡೆಯುವ ಅರ್ಜುನನ ಬಾಣಗಳ ರಭಸಕ್ಕೆ ಕೌರವ ಸೇನೆಯೆಲ್ಲವೂ ಓಡಿಹೋಗಿ ಶಿಬಿರವನ್ನು ಸೇರಿತು. ಕಡೆಗೆ ಕರ್ಣನೊಬ್ಬನೇ ಅಚಲನಾಗಿ ನಿಂತನು. ಹಾಗು ತನ್ನನ್ನು ಅಸಹಾಯ ಸ್ಥಿತಿಗೆ ಗುರಿಮಾಡಿದ ಅರ್ಜುನನ ಮೇಲೆ ಸಂತಾಪ ಹೆಚ್ಚಿ ಧಾವಿಸಿ ಬಂದನು. ಪರಶುರಾಮನಿಂದ ದೊರೆತ ಬ್ರಹ್ಮಾಸ್ತ್ರವು ಕೃತಾಸ್ತ್ರವಾಗಿ ಆತನಿಗೇನೊಂದು ಉಪಯೋಗಕ್ಕೆ ಬರಲಿಲ್ಲ. ಯಾಕಂದರೆ ಆ ಭಾರ್ಗವನ ಶಾಪವೇ ಹಾಗಾಗಿದ್ದಿತು. ಇದು ಈ ವರೆಗೆ ಯಾರಿಗೂ ತಿಳಿದಿರಲಿಲ್ಲ. ಅದನ್ನು ಪಡೆದ ಆ ಕರ್ಣನಿಗೂ ಅದರ ಬಗೆಗೆ ವಿಸ್ಮೃತಿಯಾಗಿತ್ತು. ಈಗ ಅದನ್ನು ಅರ್ಜುನನ ಮೇಲೆ ಎಸೆಯಲು ಏನೊಂದು ಪರಿಣಾಮವಾಗದ್ದಕ್ಕೆ ಕರ್ಣನು ಬಹಳೇ ನೊಂದುಕೊಂಡನು. ಇಷ್ಟೇ ಅಲ್ಲ, 'ಅಸ್ತ್ರದರಿದ್ರನಾಗಿ ಯುದ್ಧ ಮಾಡುವದಕ್ಕಿಂತ ಮರಣವೇ ಲೇಸು' ಎಂಬ ಭಾವನೆಯು ಆತನಲ್ಲಿ ಮೂಡಿ ಇನ್ನೂ ಸ್ಥಿರವಾಗಿರಲಿಲ್ಲ. ಅಷ್ಟರಲ್ಲಿ ಅರ್ಜುನನು ಪ್ರಯೋಗಿಸಿದ ದಿವ್ಯಾಸ್ತ್ರವು ಜಗದ್ವೀರ ಕರ್ಣನ ರುಂಡವನ್ನು ಹಾರಿಸಿ ಬಿಟ್ಟಿತು! ಮತ್ತು ಕರ್ಣನ ಪ್ರಾಣವನ್ನು ತೆಗೆದು ಕೊಂಡೊಯ್ದಿತು ಕರ್ಣನ ಪ್ರಾಣಗಳು ಗತಿಸುವ ಕಾಲದಲ್ಲಿಯೇ ಆ ಪ್ರಾಣಗಳ ಸಂಗಡ ಒಂದು ದಿವ್ಯ ತೇಜ ಹೊರಟು ಅದು ಕೂಡಲೇ ಹೋಗಿ ಆತನ ತಂದೆ, ಸೂರ್ಯದೇವನ ತೇಜದಲ್ಲಿ ಮಿಲನವಾಯಿತು. ಎಲ್ಲ ವೀರರು ಅರ್ಜುನನ ಶೂರತನ ಕೊಂಡಾಡಿದರು. ಕರ್ಣನ ಮಸ್ತಕವು ಮುಳುಗುವ ಸೂರ್ಯ ಬಿಂಬದಂತೆ ರಣಭೂಮಿಯ ಮೇಲೆ ಕಾಣಿಸಹತ್ತಿತು. ಕರ್ಣನ ಮೃತ ವಾರ್ತೆಯು ಕೂಡಲೆ ಸುತ್ತಲೆಲ್ಲ ಹಬ್ಬಿ ಬಿಟ್ಟಿತು. ಶಲ್ಯನು ಅಂಜಿ ಕರ್ಣನು ಮೃತನಾದುದನ್ನು ಕಂಡು ತನ್ನ ಛಿನ್ನಭಿನ್ನವಾದ ರಥವನ್ನು ಏರಿಕೊಂಡು ರಣವನ್ನು ಬಿಟ್ಟು ಹೋಗಿಬಿಟ್ಟನು. ಕರ್ಣನ ಮರಣದಿಂದ ಎಲ್ಲರಿಗೂ ಹಳಹಳಿ, ಕರ್ಣ ಸತ್ತ ಸುದ್ದಿಯನ್ನು ಧೃತರಾಷ್ಟ್ರನು ನಂಬಲಿಲ್ಲ. ಆತನು ಕರ್ಣನ ಮರಣವೆಂದರೆ 'ಕೌರವರ ಬಲದ ಆಶೆ ಹೋಯಿತು; ಹಾಗು ಪಾಂಡವರಿಗೆ ನಿರ್ಭಯವಾಯಿತು' ಎಂದು ನುಡಿದು ನಿಟ್ಟುಸಿರಿಟ್ಟನು.

